ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

**1976** ಎಪ್ರಿಲ್ ತಿಂಗಳ ಮೊದಲ ವಾರ ಲಂಡನ್‌ನಲ್ಲಿ ಒಂದು ಬೃಹತ್ ಅಂತಾರಾಷ್ಟ್ರೀಯ ಇಸ್ಲಾಮೀ ಸಮ್ಮೇಳನವು ಜರಗಿತು. 'ಇಸ್ಲಾಮಿಕ್ ಕೌನ್ಸಿಲ್ ಆಫ್ ಯೂರೋಪ್' ಸಂಸ್ಥೆಯ ಆಶ್ರಯದಲ್ಲಿ ಜರಗಿದ ಈ ಸಮ್ಮೇಳನದಲ್ಲಿ ಜಗತ್ತಿನ ಅನೇಕ ಪ್ರಸಿದ್ಧ ವಿದ್ವಾಂಸರು ಭಾಗವಹಿಸಿ, ಪ್ರಮುಖ ವಿಷಯಗಳ ಬಗ್ಗೆ ತಮ್ಮ ಪ್ರಬಂಧಗಳನ್ನು ಮಂಡಿಸಿದರು. ಜಗದ್ವಿಖ್ಯಾತ ಮುಸ್ಲಿಮ್ ಚಿಂತಕ ಹಾಗೂ ಆಧುನಿಕ ಇಸ್ಲಾಮೀ ಆಂದೋಲನದ ಹರಿಕಾರ ಮರ್ಹೂಮ್ ಮೌಲಾನಾ ಸಯ್ಯಿದ್ ಅಬುಲ್ ಅಲಾ ಮೌದೂದಿ(ರ) ಅವರನ್ನು ಈ ಸಮ್ಮೇಳನಕ್ಕೆ ವಿಶೇಷವಾಗಿ ಆಮಂತ್ರಿಸಲಾಗಿತ್ತು. ಮೌಲಾನಾ ಸಯ್ಯಿದ್ ಮೌದೂದಿ(ರ) ಅವರು ತಮ್ಮ ಅನಾರೋಗ್ಯದ ಕಾರಣ ಈ ಸಮ್ಮೇಳನದಲ್ಲಿ ಭಾಗವಹಿಸಲಿಲ್ಲ. ಆದರೆ ಅವರು ಕಳಿಸಿದ ಪ್ರಬಂಧವನ್ನು ಸಮ್ಮೇಳನದಲ್ಲಿ ಓದಿ ಕೇಳಿಸಲಾಯಿತು. ಪ್ರಬಂಧದ ಕನ್ನಡಾನುವಾದ ಇಲ್ಲಿದೆ.

ಶಾಂತಿ ಪ್ರಕಾಶನ

ಓ ಸತ್ಯವಿಶ್ವಾಸಿಗಳೇ, ನೀವು ಅಲ್ಲಾಹನಿಗಾಗಿ ಸತ್ಯದಲ್ಲೇ ನೆಲೆನಿಲ್ಲುವವರೂ ನ್ಯಾಯದ ಸಾಕ್ಷ್ಯವಹಿಸುವವರೂ ಆಗಿರಿ. ಒಂದು ವಿಭಾಗದ ಮೇಲಿನ ದ್ವೇಷವು ನಿಮ್ಮನ್ನು ನ್ಯಾಯದಿಂದ ವಿಮುಖರಾಗುವಷ್ಟು ರೇಗಿಸದಿರಲಿ. ನ್ಯಾಯ ಪಾಲಿಸಿರಿ. ಇದು ದೇವಭಯಕ್ಕೆ ಹೆಚ್ಚು ಅನುಗುಣವಾಗಿರುತ್ತದೆ. ಅಲ್ಲಾಹನನ್ನು ಭಯಪಟ್ಟು ವರ್ತಿಸಿರಿ. ನೀವು ಮಾಡುತ್ತಿರುವುದನ್ನೆಲ್ಲ ಅಲ್ಲಾಹನು ಚೆನ್ನಾಗಿ ಅರಿಯುವವನಾಗಿದ್ದಾನೆ.

(ಪವಿತ್ರ ಕುರ್‌ಆನ್ 5:8)

# ಇಸ್ಲಾಮ್ ಸಂದೇಶ

1. ಇಸ್ಲಾಮ್ ಧರ್ಮ ಪ್ರವಾದಿ ಮುಹಮ್ಮದ್(ಸ) ಅವರಿಂದ ಸ್ಥಾಪಿಸಲ್ಪಟ್ಟ ಧರ್ಮವಲ್ಲ. ಆದ್ದರಿಂದ ಪ್ರವಾದಿ ಮುಹಮ್ಮದ್(ಸ) ಅವರನ್ನು ಇಸ್ಲಾಮಿನ ಸ್ಥಾಪಕರೆಂದು ಕರೆಯುವುದು ಸರಿಯಲ್ಲ. ಪವಿತ್ರ ಕುರ್‌ಆನಿನಲ್ಲಿ ಬಹಳ ಸ್ಪಷ್ಟವಾಗಿ ಪ್ರತಿಪಾದಿಸಿರುವ ಪ್ರಕಾರ, ಜಗತ್ತಿನ ಸೃಷ್ಟಿಕರ್ತನ ವತಿಯಿಂದ ಮಾನವಕುಲಕ್ಕೆ ಯಾವಾಗಲೂ ಒಂದೇ ಧರ್ಮವನ್ನು ಕಳುಹಿಸಲಾಗಿದೆ. ಅದುವೇ ಇಸ್ಲಾಮ್ ಧರ್ಮ. ಇಸ್ಲಾಮ್ ಎಂದರೆ ದೇವನಿಗೆ ಸಂಪೂರ್ಣ ಶರಣಾಗಿ ಬಿಡುವುದು ಎಂದರ್ಥ. ಲೋಕದ ವಿವಿಧ ಭಾಗಗಳಲ್ಲಿ, ವಿವಿಧ ಜನಾಂಗಗಳಲ್ಲಿ ದೇವನ ಕಡೆಯಿಂದ ನಿಯುಕ್ತರಾದ ಯಾವ ಪ್ರವಾದಿಯೂ ಪ್ರತ್ಯೇಕ ಧರ್ಮಗಳ ಸ್ಥಾಪಕರಾಗಿರಲಿಲ್ಲ. ಆದ್ದರಿಂದ ನೂಹ್, ಇಬ್ರಾಹೀಮ್, ಮೂಸಾ, ಈಸಾ(ಅ) ಮುಂತಾದ ಪ್ರವಾದಿಗಳ ಧರ್ಮವನ್ನು 'ನೂಹ್ ಧರ್ಮ', 'ಇಬ್ರಾಹೀಮ್ ಧರ್ಮ', 'ಮೂಸಾ ಧರ್ಮ' ಅಥವಾ 'ಈಸಾ ಧರ್ಮ' ಎಂದು ಪ್ರತ್ಯೇಕವಾಗಿ ಗುರುತಿಸಲು ಸಾಧ್ಯವಿಲ್ಲ. ಜಗತ್ತಿಗೆ ಬಂದ ಪ್ರತಿಯೊಬ್ಬ ಪ್ರವಾದಿಯೂ ತಮಗಿಂತ ಮುಂಚೆ ಬಂದ ಪ್ರವಾದಿಗಳು ಬೋಧಿಸಿದ ಧರ್ಮವನ್ನೇ ಬೋಧಿಸಿದ್ದರು.

2. ಪ್ರವಾದಿಗಳ ಪೈಕಿ ಮುಹಮ್ಮದ್(ಸ) ಅವರ ವಿಶೇಷತೆ ಏನೆಂದರೆ- 1.ಅವರು ಅಲ್ಲಾಹನ ಅಂತಿಮ ಪ್ರವಾದಿ ಮತ್ತು ಅಂತಿಮ ಸಂದೇಶವಾಹಕರಾಗಿದ್ದರು. 2. ಅವರ ಮೂಲಕ ಅಲ್ಲಾಹನು, ಈ ಹಿಂದೆ ಬಂದಿದ್ದ ಎಲ್ಲ ಪ್ರವಾದಿಗಳ ಮೂಲ ಧರ್ಮವನ್ನೇ ಮತ್ತೆ ಪುನಶ್ಚೇತನಗೊಳಿಸಿದನು. 3. ವಿವಿಧ ಭಾಷೆ ಮತ್ತು ಪ್ರದೇಶಗಳ ಜನರು ಮೂಲಧರ್ಮದಲ್ಲಿ ಹಸ್ತಕ್ಷೇಪಗಳನ್ನು ಮಾಡಿ

ರಚಿಸಿಕೊಂಡಿದ್ದ ಹಲವು ಪ್ರತ್ಯಪ್ರತ್ಯೇಕ ಮತಗಳನ್ನು(Religions) ಮತ್ತೆ ಬೇರ್ಪಡಿಸಿ, ದೇವನು ಪ್ರವಾದಿ ಮುಹಮ್ಮದ್(ಸ) ಅವರ ಮೂಲಕ ಅಪ್ಪಟ ಹಾಗೂ ಪರಿಶುದ್ಧವಾದ ಮೂಲ ಇಸ್ಲಾಮ್ ಧರ್ಮದ ಸಿದ್ಧಾಂತಗಳನ್ನು ಮಾನವಕುಲಕ್ಕೆ ಕೊಟ್ಟನು. 4. ಪ್ರವಾದಿ ಮುಹಮ್ಮದ್(ಸ) ಅವರೇ ಕೊನೆಯ ಪ್ರವಾದಿಯಾಗಿದ್ದು ಅವರ ಬಳಿಕ ಯಾವುದೇ ಹೊಸ ಪ್ರವಾದಿ ಬರಲಿಕ್ಕಿಲ್ಲವಾದ್ದರಿಂದ ದೇವನು ಅವರಿಗೆ ತಾನು ಅವತರಿಸಿದ ಗ್ರಂಥವನ್ನು ಶಾಶ್ವತವಾಗಿ ಎಲ್ಲಾ ಕಾಲದಲ್ಲಿ ಮಾನವಕುಲಕ್ಕೆ ಮಾರ್ಗದರ್ಶನ ಕೊಡುತ್ತಿರಲಿಕ್ಕಾಗಿ, ಅದರ ಮೂಲಭಾಷೆಯಲ್ಲೇ ಸುರಕ್ಷಿತಗೊಳಿಸಿ ಬಿಟ್ಟಿರುವನು. ಪವಿತ್ರ ಕುರ್‌ಆನಿನಲ್ಲಿ ಯಾವುದೇ ಬಗೆಯ ಕಿಂಚಿತ್ ಹಸ್ತಕ್ಷೇಪವಾಗಲಿ, ತಿದ್ದುಪಡಿ ಅಥವಾ ಬದಲಾವಣೆಗಳಾಗಲಿ ಖಂಡಿತ ನಡೆದಿಲ್ಲ. ಇಂದು ಇರುವ ಪವಿತ್ರ ಕುರ್‌ಆನ್ ಪ್ರವಾದಿ ಮುಹಮ್ಮದ್(ಸ) ಅವರ ಮೇಲೆ ಅವತೀರ್ಣಗೊಂಡ ಗ್ರಂಥವೇ ಆಗಿದೆ. ಇದರಲ್ಲಿ ಯಾವುದೇ ಸಂದೇಹಕ್ಕೆ ಆಸ್ಪದವಿಲ್ಲ. ಪ್ರವಾದಿ ಮುಹಮ್ಮದ್(ಸ) ಅವರು ದೇವನ ವತಿಯಿಂದ ತಮ್ಮ ಮೇಲೆ ಪವಿತ್ರ ಕುರ್‌ಆನಿನ ವಾಕ್ಯಗಳು ಅವತೀರ್ಣಗೊಳ್ಳುತ್ತಿದ್ದಾಗಲೇ ಅದನ್ನು ಬರೆಸಿಕೊಳ್ಳುತ್ತಿದ್ದರು. ತಮ್ಮ ಬದುಕಿನ ಕೊನೆಯ ಕ್ಷಣದವರೆಗೂ ಅವರು ಈ ಕಾರ್ಯ ಮಾಡಿಸಿದ್ದರು. ಈ ರೀತಿ ಸಂಪೂರ್ಣ ಲಿಖಿತವಾದ ಪವಿತ್ರ ಕುರ್‌ಆನನ್ನು ಪ್ರವಾದಿವರ್ಯರ(ಸ) ನಿಧನಾನಂತರ ಪ್ರಥಮ ಖಲೀಫರು ಗ್ರಂಥ ರೂಪದಲ್ಲಿ ಸುರಕ್ಷಿತಗೊಳಿಸಿದರು. ಆ ಬಳಿಕ ತೃತೀಯ ಖಲೀಫರು ಅದರ ಹಲವು ಪ್ರತಿಗಳನ್ನು ಮಾಡಿಸಿ ಇಸ್ಲಾಮಿ ಜಗತ್ತಿನ ವಿವಿಧ ಕೇಂದ್ರಗಳಿಗೆ ರವಾನಿಸಿದರು. ಅಂದಿನಿಂದ ಇಂದಿನ ತನಕ ಯಾವುದೇ ಶತಮಾನದಲ್ಲಿ ಲೋಕದ ಯಾವುದೇ ರಾಷ್ಟ್ರದಲ್ಲಿ ಲಿಖಿತ ಅಥವಾ ಮುದ್ರಿತವಾದ ಪವಿತ್ರ ಕುರ್‌ಆನಿನ ಪ್ರತಿಗಳನ್ನು ಸಂಗ್ರಹಿಸಿ ಸೂಕ್ಷ್ಮವಾಗಿ ಪರೀಕ್ಷಿಸಿದರೂ ಅವುಗಳ ಮಧ್ಯೆ ಯಾವುದೇ ವ್ಯತ್ಯಾಸ ಕಾಣ ಸಿಗುವುದಿಲ್ಲ. ಇದಲ್ಲದೆ ಮುಹಮ್ಮದ್(ಸ) ಅವರು ಪ್ರವಾದಿಯಾದ ಆರಂಭ ದಿಂದಲೇ ನಿತ್ಯ ನಮಾಝ್‌ಗಳಲ್ಲಿ ಪವಿತ್ರ ಕುರ್‌ಆನನ್ನು ಓದಬೇಕೆಂದು ಅವರಿಗೆ ಆದೇಶವಿತ್ತು. ಆದ್ದರಿಂದ ಪ್ರವಾದಿ ಮುಹಮ್ಮದ್(ಸ) ಅವರ ಬದುಕಿನಲ್ಲೇ ಅವರ ನೂರಾರು ಸಂಗಡಿಗರು ಪವಿತ್ರ ಕುರ್‌ಆನನ್ನು ಪೂರ್ಣವಾಗಿ ಕಂಠಪಾಠ ಮಾಡಿಕೊಂಡಿದ್ದರು. ಅಲ್ಲದೆ ಅವರ ಎಲ್ಲ ಸಂಗಡಿಗರಿಗೂ ಪವಿತ್ರ ಕುರ್‌ಆನಿನ

ಾವುದಾದರೂ ಭಾಗ ಖಂಡಿತ ಕಂಠಪಾಠವಿರುತ್ತಿತ್ತು. ಅಂದಿನಿಂದ ಈ ತನಕ
ಿತ್ರ ಕುರ್‌ಆನನ್ನು ಅಕ್ಷರಶಃ ಪೂರ್ಣವಾಗಿ ಕಂಠಪಾಠ ಮಾಡುವ ಮತ್ತು ಪ್ರತಿ
ರ್ಷ ರಮಝಾನ್ ತಿಂಗಳ ತರಾವೀಹ್ ನಮಾಝ್‌ಗಳಲ್ಲಿ ಪವಿತ್ರ ಕುರ್‌ಆನ್
ೂರ್ಣವಾಗಿ ಓದಿ-ಕೇಳಿಸುವ ವ್ಯವಸ್ಥೆ ಮುಸ್ಲಿಮ್ ಜಗತ್ತಿನಾದ್ಯಂತ ಜಾರಿಯಲ್ಲಿದೆ.
ಲ್ಲ ಕಾಲಗಳಲ್ಲೂ ಲಕ್ಷಗಟ್ಟಲೆ ಮಂದಿ ಪವಿತ್ರ ಕುರ್‌ಆನನ್ನು ಪೂರ್ಣ ಕಂಠಪಾಠ
ಾಡಿ 'ಹಾಫಿಝ್'ಗಳಾಗಿದ್ದಾರೆ. ಜಗತ್ತಿನ ಬೇರಾವುದೇ ಧಾರ್ಮಿಕ ಗ್ರಂಥವು ಈ
ತಿ, ಇಷ್ಟು ಸಂಶಯಾತೀತ ಹಾಗೂ ವಿಶ್ವಸನೀಯವಾಗಿ ಲಿಖಿತವಾಗಿಯೂ
ಠಪಾಠವಾಗಿಯೂ ಸುರಕ್ಷಿತವಾಗಿಲ್ಲ. 5. ಸ್ವತಃ ಪ್ರವಾದಿ ಮುಹಮ್ಮದ್(ಸ)
ವರ ಜೀವನ ಚರಿತ್ರೆ, ಬೋಧನೆಗಳು ಮತ್ತು ದಿನಚರಿಯನ್ನು ಅವರ ಸಂಗಡಿಗರು(ರ)
ತ್ತು ಅನಂತರದ 'ಮುಹದ್ದಿಸ್'ಗಳು ಎಂತಹ ಅಪೂರ್ವ ವಿಧಾನದಿಂದ
ಗ್ರಹಿಸಿದ್ದರೆಂದರೆ, ಜಗತ್ತಿನ ಇನ್ನಾವುದೇ ಪ್ರವಾದಿ ಅಥವಾ ಐತಿಹಾಸಿಕ ವ್ಯಕ್ತಿಯ
ತಿಹಾಸ, ವಚನ ಮತ್ತು ಕೃತಿಗಳನ್ನು ಇದಕ್ಕಿಂತ ಉತ್ತಮ ಅಥವಾ ಸುರಕ್ಷಿತ
ಧಾನದಿಂದ ಸಂಗ್ರಹಿಸಲಾಗಿಲ್ಲ. ಸಂಕ್ಷಿಪ್ತವಾಗಿ ಆ ವಿಶಿಷ್ಟ ವಿಧಾನವೇನೆಂದರೆ
ಷ್ಟ ವ್ಯಕ್ತಿ ಪ್ರವಾದಿ ಮುಹಮ್ಮದ್‌ರ(ಸ) ಬಗ್ಗೆ ತನಗೆ ಅವರ ಇಂತಹ ಒಂದು
ಷಯ ಅಥವಾ ಅವರ ಇಂತಹ ಒಂದು ವಚನ ತಿಳಿದಿದೆ ಎಂದು ಹೇಳಿದರೆ
ದನ್ನು ಆತನಿಗೆ ತಿಳಿಸಿದ ಎರಡನೆಯ ವ್ಯಕ್ತಿ ಯಾರು ಮತ್ತು ಆ ಎರಡನೆಯವನಿಗೆ
ದನ್ನು ತಿಳಿಸಿದ ಮೂರನೆಯವನು ಯಾರು ಎಂದು ವಿವರವಾಗಿ ತನಿಖೆ
ಸಲಾಗುತ್ತಿತ್ತು. ಕೊನೆಗೆ ಆ ವಿಷಯವನ್ನು ಒಬ್ಬನಾದರೂ ನೇರವಾಗಿ ಪ್ರವಾದಿ
ುಹಮ್ಮದ್‌ರಿಂದಲೇ(ಸ) ತಿಳಿದು ಕೊಂಡಿರುವನೋ ಎಂಬುದನ್ನು ಖಾತ್ರಿ ಪಡಿಸಿ
ೊಳ್ಳಲಾಗುತ್ತಿತ್ತು. ಇದಾದ ಬಳಿಕ ಇಂತಹ ವಿಷಯಗಳನ್ನು ವರದಿ ಮಾಡುವ
ತಿಯೊಬ್ಬ ವ್ಯಕ್ತಿಯ ಹಿನ್ನೆಲೆ, ಜೀವನ ಚರಿತ್ರೆ ಮತ್ತು ಚಾರಿತ್ರ್ಯದ ಬಗ್ಗೆ
ಲಂಕಷ ಅಧ್ಯಯನ ನಡೆಸಲಾಗುತ್ತಿತ್ತು. ಹೀಗೆ ನಿಖರವಾಗಿ ಪ್ರತಿಯೊಂದು
ಷಯದ ಬಗ್ಗೆಯೂ ಸೂಕ್ಷ್ಮ ಜಿಜ್ಞಾಸೆ, ಪರಿಶೀಲನೆ ನಡೆಸಿದ ಬಳಿಕ ಆ
ದಿಯು ನಂಬಲರ್ಹವೋ ಅಲ್ಲವೋ ಎಂಬುದನ್ನು ತೀರ್ಮಾನಿಸುತ್ತಿದ್ದರು. ಈ
ಿ ಪ್ರವಾದಿ ವಚನಗಳನ್ನು ಕ್ರೋಢೀಕರಿಸಿದವರು, ಆ ವಚನಗಳನ್ನು ವರದಿ
ಾಡಿದ ಉಲ್ಲೇಖಕಾರರ ಬಗ್ಗೆಯೂ ವಿವರವಾದ ಮಾಹಿತಿಗಳನ್ನು ದಾಖಲಿಸಿದ

ಪ್ರತ್ಯೇಕ ಗ್ರಂಥಗಳನ್ನು ರಚಿಸಿದರು. ಆ ಮಾಹಿತಿಗಳ ಆಧಾರದಲ್ಲಿ ಇಂದು ಕೂ
ನಾವು ಪ್ರವಾದಿ ಮುಹಮ್ಮದ್(ಸ) ಅವರ ಬದುಕು ಹೇಗಿತ್ತು ಮತ್ತು ಅವ
ತಮ್ಮ ಮಾತು- ಕೃತಿಗಳ ಮೂಲಕ ಜನರಿಗೆ ಏನನ್ನು ಬೋಧಿಸಿದರು ಎಂಬ ಬ
ಸಂಶೋಧನೆ ನಡೆಸಿ ಕರಾರುವಾಕ್ಕಾಗಿ ಸತ್ಯವನ್ನು ತಿಳಿದುಕೊಳ್ಳಬಹುದು. 6.
ರೀತಿ ಸ್ವತಃ ಪವಿತ್ರ ಕುರ್‌ಆನ್ ಮತ್ತು ಈ ಗ್ರಂಥವನ್ನು ತಂದುಕೊಟ್ಟ ಮಹಾ
ಪ್ರವಾದಿಯ ಅತ್ಯಂತ ಸುರಕ್ಷಿತ, ಅಧಿಕೃತ ಜೀವನ ಚರಿತ್ರೆ ಮತ್ತು ಆದರ್ಶ
ಇವೆರಡೂ ಎಲ್ಲಾ ಕಾಲಗಳಿಗೂ ನಿಜವಾದ ದೇವಧರ್ಮ ಏನು; ಅದು ಕೊಡು
ಮಾರ್ಗದರ್ಶನವೇನು, ಅದು ನಮ್ಮಿಂದೇನು ಬಯಸುತ್ತದೆ ಎಂಬುದನ್ನು ತಿಳಿ
ಕೊಳ್ಳುವ ಮಾಧ್ಯಮಗಳಾಗಿ ಉಳಿದಿದೆ.

3. ನಾವು ಪ್ರವಾದಿ ಮಹಮ್ಮದ್(ಸ) ಅವರಿಗಿಂತ ಮುಂಚೆ ಆಗಮಿಸಿ
ಪವಿತ್ರ ಕುರ್‌ಆನಿನಲ್ಲಿ ಪ್ರಸ್ತಾಪಿಸಲಾಗಿರುವ ಅಥವಾ ಅದರಲ್ಲಿ ಪ್ರಸ್ತಾಪಿಸ
ಬಿಟ್ಟಿರುವ ಎಲ್ಲ ಪ್ರವಾದಿಗಳ ಮೇಲೆ ವಿಶ್ವಾಸವಿಡುತ್ತೇವೆ. ಈ ವಿಶ್ವಾಸ ನಮ
ಮಟ್ಟಿಗೆ ಎಷ್ಟು ಮಹತ್ವ ಪೂರ್ಣ ವಿಶ್ವಾಸವೆಂದರೆ, ಈ ವಿಶ್ವಾಸ ಇಲ್ಲದಿದ್ದ
ನಾವು ಮುಸಲ್ಮಾನರಾಗಲಿಕ್ಕೆ ಸಾಧ್ಯವಿಲ್ಲ. ಆದರೂ ಜೀವನದ ಮಾರ್ಗದರ್ಶನ
ನಾವು ಪ್ರವಾದಿ ಮುಹಮ್ಮದ್(ಸ) ಅವರನ್ನೇ ಅವಲಂಬಿಸುತ್ತೇವೆ. ಇದಕ್ಕೆ ಕಾರ
ಸಂಕುಚಿತವಾದವಲ್ಲ. ನಿಜವಾದ ಕಾರಣಗಳು ಹೀಗಿವೆ. 1. ಮುಹಮ್ಮದ್(ಸ
ಅಂತಿಮ ಪ್ರವಾದಿಯಾಗಿದ್ದು ಅವರ ಸಂದೇಶವು ದೇವನ ವತಿಯಿಂದ ಬಂ
ಸಂದೇಶಗಳ ಪೈಕಿ ಕೊನೆಯ ಹಾಗೂ ಅತ್ಯಾಧುನಿಕ(Latest Dispensation)ವಾಗಿ
2. ಅವರ ಮೂಲಕ ನಮಗೆ ತಲುಪಿರುವ ದಿವ್ಯವಾಣಿಯು(Word of Goc
ಅಪ್ಪಟ ದೇವವಾಣಿಯಾಗಿದ್ದು ಅದರಲ್ಲಿ ಯಾವುದೇ ಬಗೆಯ, ಯಾವುದ
ಪ್ರಮಾಣದ ಮನುಷ್ಯ ಹಸ್ತಕ್ಷೇಪಗಳು ತೀರಾ ನಡೆದಿಲ್ಲ. ಅದು ತನ್ನ ಮೂ
ಭಾಷೆಯಲ್ಲಿ ಸುರಕ್ಷಿತವಿದೆ. ಅದರ ಭಾಷೆ ಈಗಲೂ ಒಂದು ಜೀವಂ
ಭಾಷೆಯಾಗಿದ್ದು, ಕೋಟಿಗಟ್ಟಲೆ ಜನರು ಮಾತನಾಡುವ, ಓದುವ, ಬರೆಯು
ಮತ್ತು ವ್ಯವಹರಿಸುವ ಭಾಷೆಯಾಗಿದೆ. ಪವಿತ್ರ ಕುರ್‌ಆನ್ ಅವತೀರ್ಣಗೊಂ
ಬಳಿಕ ಇಂದಿನ ವರೆಗೆ ಆ ಭಾಷೆಯ ವ್ಯಾಕರಣ, ಉಚ್ಚಾರ, ಲಿಪಿ, ಶಬ್ದಾರ್ಥ
ನುಡಿಗಟ್ಟು ಇತ್ಯಾದಿಗಳಲ್ಲಿ ಯಾವುದೇ ಗಣನೀಯ ಬದಲಾವಣೆ ಉಂಟಾಗಿಲ್ಲ

ಈಗಾಗಲೇ ಹೇಳಿರುವಂತೆ ಪ್ರವಾದಿ ಮುಹಮ್ಮದ್‌ರ(ಸ) ವ್ಯಕ್ತಿತ್ವ, ಚರಿತ್ರೆ,
ರ ವಚನಗಳು, ಬೋಧನೆಗಳು ಮತ್ತಿತರ ಎಲ್ಲ ವಿವರಗಳ ಅಪ್ಪಟ ಐತಿಹಾಸಿಕ
ಖಲೆಯು ಅತ್ಯಂತ ಅಧಿಕೃತ ರೂಪದಲ್ಲಿ ಗರಿಷ್ಠ ವಿಶ್ವಸನೀಯತೆಯೊಂದಿಗೆ
ಳ ಸವಿಸ್ತಾರವಾಗಿ ಸುರಕ್ಷಿತವಾಗಿದೆ. ಇಂತಹ ವೈಶಿಷ್ಟ್ಯ ಬೇರಾವುದೇ
ವಾದಿಯಲ್ಲಿ ಇಲ್ಲವಾದ್ದರಿಂದ ನಾವು ಅವರ ಮೇಲೆ ವಿಶ್ವಾಸವಿಡುತ್ತೇವಾದರೂ
ಯೋಗಿಕವಾಗಿ ಬೇರೆ ಪ್ರವಾದಿಗಳನ್ನು ಅನುಸರಿಸುವಂತಿಲ್ಲ.

4. ನಮ್ಮ ನಂಬಿಕೆಯಂತೆ, ಪ್ರವಾದಿ ಮುಹಮ್ಮದ್(ಸ) ಅವರ ಪ್ರವಾದಿತ್ವವು
ೀ ಜಗತ್ತಿಗೆ ಮತ್ತು ಎಲ್ಲ ಕಾಲಗಳಿಗೆ ಅನ್ವಯಿಸುತ್ತದೆ. ಏಕೆಂದರೆ - 1. ಪವಿತ್ರ
್‌ಆನ್ ಅದನ್ನು ಸ್ಪಷ್ಟವಾಗಿ ಸಾರುತ್ತದೆ. 2. ಮುಹಮ್ಮದ್(ಸ) ಅವರು
ನೆಯ ಪ್ರವಾದಿಯಾದುದರಿಂದ ಸ್ವಾಭಾವಿಕವಾಗಿಯೇ ಅವರ ಪ್ರವಾದಿತ್ವ ಇಡೀ
ತ್ತಿಗೆ ಮತ್ತು ಎಲ್ಲ ಕಾಲಗಳಿಗೆ ಅನ್ವಯಿಸಲೇಬೇಕಾಗಿದೆ. ಅಂತಿಮ ಪ್ರವಾದಿಯು
ಅನಂತರದ ಕಾಲದ ಎಲ್ಲ ಮಾನವರಿಗೆ ಮಾರ್ಗದರ್ಶಕನಾಗಿರಬೇಕಾದುದು
ರಲ್ಲಿ ಕೊನೆಗೊಂಡಿರುವುದರ ಪ್ರವಾದಿತ್ವ ಸಹಜ ಬೇಡಿಕೆಯಾಗಿದೆ. 3.
ನವಕುಲಕ್ಕೆ ಅಗತ್ಯವಿರುವ ಸನ್ಮಾರ್ಗ ಮತ್ತು ಮಾರ್ಗದರ್ಶನವನ್ನು ಪ್ರವಾದಿ
ಹಮ್ಮದ್‌ರ(ಸ) ಮೂಲಕ ಪರಿಪೂರ್ಣ ರೂಪದಲ್ಲಿ ಕೊಟ್ಟು ಬಿಡಲಾಗಿದೆ.
ು ಕೂಡಾ ಅವರು ಅಂತಿಮ ಪ್ರವಾದಿ ಎಂಬುದರ ಸಹಜ ಪರಿಣಾಮವಾಗಿದೆ.
ಂದರೆ, ಒಂದು ವೇಳೆ ಒಬ್ಬ ಪ್ರವಾದಿಯ ಮಾರ್ಗದರ್ಶನವು ಅಪೂರ್ಣ
ರೂಪದ್ದಾಗಿದ್ದರೆ ಆತನು ಅಂತಿಮ ಪ್ರವಾದಿ ಎನಿಸಿಕೊಳ್ಳಲು ಸಾಧ್ಯವಿಲ್ಲ. ಆತನ
ಕ ಮತ್ತೆ ಪ್ರವಾದಿಗಳ ಆಗಮನದ ಅಗತ್ಯವಿರುತ್ತದೆ. 4. ಪ್ರವಾದಿ
ಹಮ್ಮದ್(ಸ) ಅವರ ಬಳಿಕ ಇದೀಗ 14 ಶತಮಾನಗಳು ಕಳೆದು ಹೋಗಿದ್ದರೂ
ವರೆಗೆ ತಾನು ಪ್ರವಾದಿ ಎಂದು ವಾದಿಸುತ್ತಾ ತನ್ನ ಮಾತು, ಕೃತಿ, ಚಾರಿತ್ರ್ಯ
ತ್ತು ಸ್ವಭಾವದಲ್ಲಿ ಕಿಂಚಿತ್ತಾದರೂ ಪ್ರವಾದಿಗಳ ಜೊತೆ ಹೋಲಿಕೆ ಇರುವ-
ವಾ ತನಗೆ ದೇವವಾಣಿ ಅವತರಿಸುತ್ತದೆಂದು ವಾದಿಸುತ್ತಾ ದೇವವಾಣಿಯೊಂದಿಗೆ
ು ಮಾತ್ರವಾದರೂ ಹೋಲಿಕೆಯುಳ್ಳ ಒಂದು ಗ್ರಂಥವನ್ನು ಮುಂದಿಡಬಲ್ಲ
ವಾ ಶರೀಅತ್ (ಧರ್ಮ ಸಂಹಿತೆ) ತಂದುಕೊಟ್ಟವನೆಂಬ (Law-giver)
ುದಿಗೆ ಪಾತ್ರನಾಗಬಲ್ಲ ಒಬ್ಬನೇ ಒಬ್ಬ ವ್ಯಕ್ತಿಯೂ ಮೂಡಿಬಂದಿಲ್ಲ.

5. ಪ್ರವಾದಿಗಳ ಮೂಲಕ ಮಾತ್ರ ಸಿಗಬಹುದಾದ ವಿಶಿಷ್ಟ ಜ್ಞಾನವೊಂ ಮನುಷ್ಯನ ಪಾಲಿಗೆ ಎಷ್ಟು ಅವಶ್ಯಕ ಎಂಬುದನ್ನು ಈ ಹಂತದಲ್ಲಿ ತಿಳಿದುಕೊ ಬೇಕಾದುದು ಅಗತ್ಯ.

ಜಗತ್ತಿನಲ್ಲಿ ಕೆಲವು ವಿಷಯ-ವಸ್ತುಗಳನ್ನು ನಾವು ನೇರವಾಗಿ ನ ಇಂದ್ರಿಯಗಳ ಮೂಲಕವೇ ತಿಳಿದು ಕೊಳ್ಳಬಹುದು. ಮತ್ತೆ ಕೆಲವು ವಸ್ತುಗಳ ನಾವು ನಮ್ಮ ವೈಜ್ಞಾನಿಕ ಉಪಕರಣಗಳನ್ನು(Scientific Instruments) ಬ ತಿಳಿದುಕೊಳ್ಳುತ್ತೇವೆ. ಈ ಮೂಲಗಳಿಂದ ನಮಗೆ ದೊರೆತ ಮಾಹಿತಿಗಳನ್ನು ನಾ ತರ್ಕ, ಚಿಂತನೆ, ಅನುಭವ ಮತ್ತು ಪ್ರಯೋಗಗಳ ಒರೆಗಲ್ಲಿಗೆ ಹಚ್ಚಿ ಹೊಸ ಹೊ ತೀರ್ಮಾನಗಳಿಗೆ ತಲುಪುತ್ತೇವೆ. ಇಂತಹ ವಸ್ತುಗಳ ಬಗೆಗಿನ ಜ್ಞಾನವು ನವ ನೇರವಾಗಿ ದೇವನಿಂದಲೇ ಸಿಗಬೇಕಾಗಿಲ್ಲ. ಈ ವಿಷಯಗಳಲ್ಲೂ ಸೃಷ್ಟಿಕರ್ತ ಇಂದ್ರಿಯ ಮತ್ತಿತರ ಮಾಧ್ಯಮಗಳನ್ನು ದಯಪಾಲಿಸುವ ಮೂಲಕ ನವ ಮಾರ್ಗದರ್ಶನ ಮಾಡಿರುವನಾದರೂ ನಿಜವಾಗಿ ಇವು ನಮ್ಮ ಸಂಶೋಧ ಜಿಜ್ಞಾಸೆ, ತರ್ಕ, ಚಿಂತನೆ, ಪ್ರಯೋಗ ಮತ್ತು ಅನುಭವಗಳ ಕ್ಷೇತ್ರಗಳಾಗಿ ಇತಿಹಾಸದಾದ್ಯಂತ ನಮಗರಿವಿಲ್ಲದಂತೆಯೇ ಹಂತಹಂತವಾಗಿ, ಬಹಳ ಯೋಜ ಬದ್ಧವಾಗಿ ದೇವನು ನಮಗೆ ತನ್ನ ಸೃಷ್ಟಿಯನ್ನು ಹೆಚ್ಚೆಚ್ಚು ಪರಿಚಿತಗೊಳಿಸು ಬಂದಿರುವನು. ಜ್ಞಾನ ಮತ್ತು ತಿಳುವಳಿಕೆಯ ಬಾಗಿಲುಗಳನ್ನು ಅವನು ತವ ಮುಂದೆ ತೆರೆಯುತ್ತಲೇ ಬಂದಿರುವನು. ಇದಲ್ಲದೆ ಆಗೊಮ್ಮೆ ಈಗೊಮ್ಮೆ ಯಾರಾದರೊಬ್ಬ ವ್ಯಕ್ತಿಗೆ ಹಠಾತ್ತನೆ ಯಾವುದಾದರೊಂದು ಹೊಸ ಸಂಶೋಧ ನಡೆಸುವ ಅಥವಾ ಹೊಸ ಭೌತಿಕ ಸೂತ್ರಗಳನ್ನು ಭೇದಿಸುವ ಸಾಮರ್ಥ್ಯವ ಅವನು ಕೊಡುತ್ತಾ ಬಂದಿರುವನು. ಆದರೂ ಒಟ್ಟಿನಲ್ಲಿ ಇವೆಲ್ಲವೂ ಮನುಷ ಜ್ಞಾನದ ಕ್ಷೇತ್ರಗಳಾಗಿದ್ದು ಅದಕ್ಕೆ ಒಬ್ಬ ಪ್ರವಾದಿ ಅಥವಾ ಯಾವುದೇ ದಿ ಗ್ರಂಥದ ಅಗತ್ಯ ಖಂಡಿತ ಇಲ್ಲ. ಏಕೆಂದರೆ ಈ ಲೌಕಿಕ ಕ್ಷೇತ್ರದಲ್ಲಿ ಮನುಷ್ಯ ಅಗತ್ಯವಿರುವ ತಿಳುವಳಿಕೆಗಳನ್ನು ಗಳಿಸಲು ಬೇಕಾದ ಮಾಧ್ಯಮಗಳನ್ನು ದೇವ ದಯಪಾಲಿಸಿರುವನು.

ಆದರೆ ಇದಕ್ಕೆ ಭಿನ್ನವಾಗಿ, ನಮ್ಮ ಇಂದ್ರಿಯಗಳಿಗೆ ನಿಲುಕದ, ನವ ಉಪಕರಣಗಳಿಗೆ ಎಟುಕದ ಕೆಲವು ಸಂಗತಿಗಳಿವೆ. ಅವುಗಳನ್ನು ಅಳೆಯಲು

ತೂಗಲು ಅಥವಾ ನಮ್ಮಲ್ಲಿ ಲಭ್ಯವಿರುವ ಯಾವುದೇ ಮಾಧ್ಯಮ ಅಥವಾ ಜ್ಞಾನ ಮೂಲದಿಂದ ( Source) ಆ ಕುರಿತು ಖಚಿತವಾಗಿ 'ಜ್ಞಾನ' (Knowledge) ಎನ್ನಬಹುದಾದ ಸ್ಪಷ್ಟ ತಿಳುವಳಿಕೆ ಪಡೆಯಲು ಸಾಧ್ಯವಿಲ್ಲ. ಈ ಬಗ್ಗೆ ವಿಜ್ಞಾನಿಗಳು ಮತ್ತು ತತ್ವ ಚಿಂತಕರು ನೀಡುವ ಅಭಿಪ್ರಾಯಗಳೆಲ್ಲಾ ಕೇವಲ ಅವರ ಊಹೆ (guess) ತರ್ಕ ಮತ್ತು ಗುಮಾನಿಗಳಾಗಿರುತ್ತವೆ. ಅವುಗಳನ್ನು ಜ್ಞಾನ ಎಂದು ಕರೆಯುವಂತಿಲ್ಲ. ಈ ಪರಮ ಸತ್ಯ(Ultimate Realities) ಅಥವಾ ಅಂತಿಮ ಸತ್ಯಗಳ ಬಗ್ಗೆ ತಮ್ಮ ವಾದಗಳೆಲ್ಲಾ ಸಂಶಯಾತೀತವಾಗಿ ಖಚಿತವೆಂದು ಸ್ವತಃ ಈ ವಾದಗಳನ್ನು ಮಂಡಿಸಿ ದವರೂ ಹೇಳಿಕೊಳ್ಳುವುದಿಲ್ಲ. ನಿಜವಾಗಿ ಈ ಚಿಂತಕರು ಮತ್ತು ತತ್ವಜ್ಞಾನಿಗಳಿಗೆ ತಮ್ಮ ಜ್ಞಾನ ಹಾಗೂ ತಿಳುವಳಿಕೆಯ ಮಿತಿಗಳು ತಿಳಿದಿದ್ದರೆ ಅವರು ಸ್ವತಃ ಈ ವಾದಗಳನ್ನು ನಂಬುತ್ತಿರಲಿಲ್ಲ. ಇತರರಿಗೂ ಅವುಗಳನ್ನು ನಂಬುವಂತೆ ಕರೆಕೊಡುತ್ತಿರಲಿಲ್ಲ.

ಒಟ್ಟಿನಲ್ಲಿ ಈ ಪಾರಮಾರ್ಥಿಕ ಸತ್ಯಗಳನ್ನು ಅರಿಯಲು ಮನುಷ್ಯನು ತನ್ನ ಸೃಷ್ಟಿಕರ್ತನ ವತಿಯಿಂದ ಸಿಗುವ ಜ್ಞಾನವನ್ನು ಅವಲಂಬಿಸಬೇಕಾದುದು ಅನಿವಾರ್ಯ ವಾಗಿದೆ. ಇನ್ನು ಸೃಷ್ಟಿಕರ್ತನು, ಈ ಜ್ಞಾನವನ್ನು ಮಾನವಕುಲಕ್ಕೆ ಕೊಡಲು ಪುಸ್ತಕ ರೂಪದಲ್ಲಿ ಅದನ್ನು ಪ್ರಕಟಿಸಿ ಪ್ರತಿಯೊಬ್ಬನಿಗೆ ವಿತರಣೆ ಮಾಡಿ, "ನೀನು ಇದನ್ನು ಓದಿ, ನಿನ್ನ ಮತ್ತು ಈ ವಿಶ್ವದ ವಾಸ್ತವಿಕತೆಯನ್ನು ತಿಳಿದುಕೊಂಡು, ಆ ವಾಸ್ತವಿಕತೆಗಳ ಆಧಾರದಲ್ಲಿ, ಈ ಲೋಕದಲ್ಲಿ ನಿನ್ನ ವರ್ತನೆ ಹೀಗಿರಬೇಕೆಂಬುದನ್ನು ತೀರ್ಮಾನಿಸು" ಎಂದು ಎಲ್ಲರಿಗೂ ಹೇಳುವಂತಹ ವಿಧಾನವನ್ನು ಎಂದೂ ಅನುಸರಿಸುವುದಿಲ್ಲ. ಅವನು ಈ ಜ್ಞಾನವನ್ನು ಮಾನವಕುಲಕ್ಕೆ ತಲುಪಿಸ ಲಿಕ್ಕಾಗಿ ಯಾವಾಗಲೂ ಪ್ರವಾದಿಗಳನ್ನೇ ಮಾಧ್ಯಮಗಳಾಗಿ ಬಳಸಿದ್ದಾನೆ. ದಿವ್ಯವಾಣಿಯ ಮೂಲಕ ಪ್ರವಾದಿಗಳಿಗೆ ಆ ವಾಸ್ತವಿಕತೆಗಳನ್ನು ತಿಳಿಸಿ, ಅದನ್ನು ಜನರಿಗೆ ತಲುಪಿಸುವ ಹೊಣೆಯನ್ನು ಪ್ರವಾದಿಗಳಿಗೆ ವಹಿಸಿಕೊಡುವ ವಿಧಾನವನ್ನೇ ಅವನು ಸದಾ ಅನುಸರಿಸಿದ್ದಾನೆ.

6. ಕೇವಲ ದೇವದತ್ತ ಜ್ಞಾನವನ್ನು ಜನರಿಗೆ ತಲುಪಿಸುವುದು ಮಾತ್ರ ಪ್ರವಾದಿಗಳ ಹೊಣೆಗಾರಿಕೆಯಲ್ಲ. ಪ್ರಸ್ತುತ ಜ್ಞಾನದ ಆಧಾರದಲ್ಲಿ ಮನುಷ್ಯ ಮತ್ತು ದೇವನ ಮಧ್ಯೆ, ಮನುಷ್ಯ ಮತ್ತು ಮನುಷ್ಯರ ಮಧ್ಯೆ ಇರುವ ಮತ್ತು ಇರಬೇಕಾದ

ವಾಸ್ತವಿಕ-ಮತ್ತು ಪ್ರಾಯೋಗಿಕ ಸಂಬಂಧಗಳೇನು? ಆರಾಧನೆ, ನೈತಿಕತೆ, ನಾಗರಿ
ಮುಂತಾದ ಕ್ಷೇತ್ರಗಳಲ್ಲಿ ಮನುಷ್ಯನ ಕರ್ತವ್ಯಗಳೇನು? ಈ ಜ್ಞಾನದ ಪ್ರ
ಸಮಾಜ, ಆರ್ಥಿಕತೆ, ರಾಜಕೀಯ, ನ್ಯಾಯಾಂಗ, ಯುದ್ಧ, ಸಂಧಾನ, ಅಂತಾರಾಷ್ಟ್ರೀ
ಸಂಬಂಧಗಳು, ಶಿಕ್ಷಣ, ವಾಣಿಜ್ಯ ಮತ್ತಿತರ ಬದುಕಿನ ವಿವಿಧ ಕ್ಷೇತ್ರಗಳು ಯ
ಮೂಲ ಸೂತ್ರಗಳ ಆಧಾರದಲ್ಲಿ ರೂಪಿಸಲ್ಪಡಬೇಕು ಮುಂತಾದ ಎಲ್ಲ ವಿಷ
ಗಳನ್ನು ಕಲಿಸಿ ಕೊಡಬೇಕಾದ ಹೊಣೆಗಾರಿಕೆಯೂ ಪ್ರವಾದಿಗಳ ಮೇಲಿರುತ್ತ
ಜಗತ್ತಿನಲ್ಲಿ ಸಾಮಾನ್ಯವಾಗಿ ಮತ(Religion)ಎಂದು ಕರೆಯಲ್ಪಡುವ ಕೇ
ಕೆಲವು ಆರಾಧನಾ ವಿಧಾನಗಳನ್ನು ಮತ್ತು ಕೆಲವು ಸಂಪ್ರದಾಯಗಳನ್ನು ಕಲಿಸುವು
ಮಾತ್ರ ಪ್ರವಾದಿಯ ಕೆಲಸವಾಗಿರುವುದಿಲ್ಲ. ನಿಜವಾಗಿ ಪ್ರವಾದಿಯು ಒಂ
ಪರಿಪೂರ್ಣ ಜೀವನ ವ್ಯವಸ್ಥೆಯನ್ನು ತರುತ್ತಾನೆ. ಇಸ್ಲಾಮಿನ ಭಾಷೆಯಲ್ಲಿ(Ter
ಅದನ್ನು 'ದೀನ್'(Way of Life, ಜೀವನ ಕ್ರಮ) ಎನ್ನಲಾಗುತ್ತದೆ.

7. ಒಬ್ಬ ಪ್ರವಾದಿಯ ಕಾರ್ಯಕ್ಷೇತ್ರವು ಕೇವಲ ಧಾರ್ಮಿಕ ತಿಳುವ
ಗಳನ್ನು ಕೊಡುವುದಕ್ಕೆ ಮಾತ್ರ ಸೀಮಿತವಾಗಿರುವುದಿಲ್ಲ. ತಾನು ಪ್ರತಿಪಾದಿಸ
ಧರ್ಮವನ್ನು ಸ್ವೀಕರಿಸುವ ಮೂಲಕ ಮುಸ್ಲಿಮ್ ಆಗಿರುವ ಜನರಿಗೆ ಧರ್ಮ
ತಿರುಳು, ಅದರ ಮೂಲಭೂತ ವಿಶ್ವಾಸ, ಬೇಡಿಕೆಗಳು, ನೈತಿಕ ನಿಯಮಗ
ಆರಾಧನಾ ಕ್ರಮಗಳು, ಕಾನೂನು... ಹೀಗೆ ಸಂಪೂರ್ಣ ಜೀವನಕ್ರಮವ
ವಿವರವಾಗಿ ಕಲಿಸಿ ಕೊಡಬೇಕಾದುದು, ಅವರ ಮುಂದೆ ಸ್ವತಃ ಒಬ್ಬ ಪರಿಪೂ
ಮುಸ್ಲಿಮನಾಗಿ ಆದರ್ಶ ಬದುಕನ್ನು ಬದುಕಿ, ತನ್ನ ಜೀವನದಲ್ಲೇ ಇತರ
ತನ್ನನ್ನು ಅನುಸರಿಸುವಂತೆ ನೋಡಿಕೊಳ್ಳಬೇಕಾದುದು, ತನ್ನ ಅನುಯಾಯಿಗಳ
ವೈಯಕ್ತಿಕ ಮತ್ತು ಸಾಮೂಹಿಕ ಸ್ತರಗಳಲ್ಲಿ ಚೆನ್ನಾಗಿ ತರಬೇತಿಗೊಳಿಸಿ, ಪಳ
ಒಂದು ಆದರ್ಶ ಇಸ್ಲಾಮಿ ಸಮಾಜ ಮತ್ತು ನಾಗರಿಕತೆಯನ್ನು ಪ್ರಾಯೋಗಿಕವ
ನಿರ್ಮಿಸಿ ತೋರಿಸಬೇಕಾದುದು ಮತ್ತು ಅಂತಿಮವಾಗಿ ಇತರೆಲ್ಲಾ ವ್ಯವಸ್ಥೆಯ
ಕೆಡಹಿ ದಿವ್ಯ ವ್ಯವಸ್ಥೆಯನ್ನು ಸ್ಥಾಪಿಸಲಿಕ್ಕಾಗಿ ಹಾಗೂ ದೇವ ಧರ್ಮದ ನ
ಸಂಸ್ಥಾಪನೆಗಾಗಿ ಸಕ್ರಿಯವಾಗಿ ನಿರಂತರ ಶ್ರಮಿಸುವಂತಹ ಒಂದು ಸಂಘ
ಸಮಾಜವನ್ನೇ ಕಟ್ಟಿ ಬೆಳೆಸಬೇಕಾದುದು ಕೂಡಾ ಪ್ರವಾದಿಯ ಹೊಣೆಗಾರಿಕೆಗಳ
ಸೇರಿದೆ. ಲೋಕಕ್ಕೆ ಬಂದ ಎಲ್ಲ ಪ್ರವಾದಿಗಳೂ ಈ ಎಲ್ಲ ಹೊಣೆಗಾರಿಕೆಗಳ

ಅಂತಿಮ ಹಾಗೂ ಪರಿಪೂರ್ಣ ರೂಪದಲ್ಲಿ ಈಡೇರಿಸುವಲ್ಲಿ ಯಶಸ್ವಿಯಾಗಿರ ಬೇಕಾಗಿಲ್ಲ. ಅದೆಷ್ಟೋ ಪ್ರವಾದಿಗಳು- ತಮ್ಮಿಂದ ಯಾವುದೇ ತಪ್ಪು ಸಂಭವಿಸ ದಿದ್ದರೂ - ತಮ್ಮ ಸಮಕಾಲೀನರ ಸಂಕುಚಿತತೆ, ಪ್ರತಿರೋಧ ಮತ್ತು ಪ್ರತಿಕೂಲ ಪರಿಸ್ಥಿತಿಗಳಿಂದ ಈ ಕಾರ್ಯದಲ್ಲಿ ವಿಫಲರಾದರು. ಏನಿದ್ದರೂ ಇವೆಲ್ಲಾ ಪ್ರವಾದಿಗಳ ಹೊಣೆಗಾರಿಕೆಗಳು ಎಂಬುದು ಮಾತ್ರ ದಿಟ. ಇತಿಹಾಸದಲ್ಲಿ ಪ್ರವಾದಿ ಮುಹಮ್ಮದ್‌ರಿಗೆ(ಸ) ಮಾತ್ರ ಈ ಎಲ್ಲಾ ಹೊಣೆಗಾರಿಕೆಗಳನ್ನು ಪರಿಪೂರ್ಣವಾಗಿ ಈಡೇರಿಸಿ ದಿವ್ಯವ್ಯವಸ್ಥೆಯನ್ನು ಸಾಕ್ಷಾತ್ 'ದೇವಲೋಕ'ದಲ್ಲಿರು ವಂತೆಯೇ ಭೂಲೋಕದಲ್ಲೂ ಸ್ಥಾಪಿಸಿ ತೋರಿಸಿದ ಏಕೈಕ ಪ್ರವಾದಿ ಎಂಬ ವಿಶೇಷ ಸ್ಥಾನಮಾನ ಪ್ರಾಪ್ತವಿದೆ.

8. ಪವಿತ್ರ ಕುರ್‌ಆನ್ ಮತ್ತು ಪ್ರವಾದಿ ಮುಹಮ್ಮದ್(ಸ) ಅವರು, ಆರಂಭದಿಂದಲೂ ಸಂಪೂರ್ಣ ಮಾನವ ಜನಾಂಗವನ್ನು ಅಭಿಸಂಬೋಧಿಸಿದ್ದಾರೆ, ಇಲ್ಲವೇ ಮಾನವರ ಪೈಕಿ ಇಸ್ಲಾಮಿನ ಸತ್ಯ ಸಂದೇಶವನ್ನು ಸ್ವೀಕರಿಸಿದವರನ್ನು ಸತ್ಯವಿಶ್ವಾಸಿಗಳೆಂಬ ನೆಲೆಯಲ್ಲಿ ಅಭಿಸಂಬೋಧಿಸಿದ್ದಾರೆ. ನೀವು ಪವಿತ್ರ ಕುರ್‌ಆನನ್ನು ಆರಂಭದಿಂದ ಕೊನೆಯ ತನಕ ಅಭ್ಯಸಿಸಿ ನೋಡಿ, ಪ್ರವಾದಿ ಮುಹಮ್ಮದ್(ಸ) ಅವರ ಭಾಷಣ, ವಚನ ಮತ್ತು ಸಂಭಾಷಣೆಗಳ ಎಲ್ಲ ದಾಖಲೆಗಳನ್ನು ಸಂಶೋಧಿಸಿ ನೋಡಿ, ಈ ಗ್ರಂಥವಾಗಲೀ ಅದನ್ನು ತಂದುಕೊಟ್ಟ ಪ್ರವಾದಿಯಾಗಲೀ ಎಂದೂ ಯಾವುದಾದರೊಂದು ವಿಶಿಷ್ಟ ಜನಾಂಗ, ರಾಷ್ಟ್ರ, ವರ್ಣ, ವರ್ಗ ಅಥವಾ ಭಾಷೆಯ ಜನರನ್ನು ಮಾತ್ರ ಉದ್ದೇಶಿಸಿ ಏನಾದರೂ ಹೇಳಿರುವುದು ನಿಮಗೆ ಖಂಡಿತ ಕಾಣಲಾರದು. ಕುರ್‌ಆನ್ ಮತ್ತು ಪ್ರವಾದಿ ವಚನಗಳಲ್ಲಿ ಎಲ್ಲೆಡೆಯೂ "ಯಾ ಅಯ್ಯುಹನ್ನಾಸ್"(ಓ ಮಾನವರೇ), "ಯಾ ಬನೀ ಆದಮ್"(ಓ ಆದಮ್‌ರ ಸಂತತಿಗಳೇ) ಎಂದು ಸಂಪೂರ್ಣ ಮಾನವಕುಲವನ್ನು ಅಭಿಸಂಬೋಧಿಸಿ ಇಸ್ಲಾಮಿ (ಅರ್ಥಾತ್ ದೇವನಿಗೆ ಶರಣಾಗುವ) ನೀತಿಯನ್ನು ಸ್ವೀಕರಿಸಲು ಕರೆ ಕೊಟ್ಟಿರುವುದನ್ನು ಅಥವಾ "ಯಾ ಅಯ್ಯುಹಲ್ಲದೀನ ಆಮನೂ"(ಓ ಸತ್ಯವಿಶ್ವಾಸಿಗಳೇ) ಎಂದು ಕರೆದು ಆಗಲೇ ಇಸ್ಲಾಮ್ ಸ್ವೀಕರಿಸಿರುವ ಸತ್ಯವಿಶ್ವಾಸಿಗಳಿಗೆ ವಿವಿಧ ಆದೇಶಗಳನ್ನು ಕೊಟ್ಟಿರುವುದನ್ನು ಮಾತ್ರ ಕಾಣಬಹುದು. ಇದರಿಂದ, ಇಸ್ಲಾಮಿನ ಸಂದೇಶ ಜಾಗತಿಕ(Universal) ಸ್ವರೂಪದ ವಿಶಾಲ ಸಂದೇಶವಾಗಿದ್ದು ಅದನ್ನು ಸ್ವೀಕರಿಸುವ

ಎಲ್ಲ ಮನುಷ್ಯರೂ ಸಮಾನ ಹಕ್ಕು-ಅಧಿಕಾರಗಳುಳ್ಳ ಸಮಾನ ಮುಸ್ಲಿಮ್
(ವಿಶ್ವಾಸಿ, Believer)ಗಳಾಗುವುದು ಎಂಬ ಅಂಶವು ವ್ಯಕ್ತವಾಗುತ್ತದೆ. "ಸತ್ಯವಿಶ್ವಾ
ಗಳೆಲ್ಲರೂ ಪರಸ್ಪರ ಸಹೋದರರು" ಎಂದು ಪವಿತ್ರ ಕುರ್‌ಆನ್ ಸ್ಪಷ್ಟವಾ
ಹೇಳಿದೆ. ಪ್ರವಾದಿ ಮುಹಮ್ಮದ್(ಸ) ಅವರು ಹೇಳಿರುವ ಪ್ರಕಾರ, ಇಸ್ಲಾವಿ
ವಿಶ್ವಾಸವನ್ನು ಅಂಗೀಕರಿಸಿ ಮುಸ್ಲಿಮರಂತಹ ವರ್ತನೆಯಲ್ಲಿ ತೊಡಗು
ಪ್ರತಿಯೊಬ್ಬರಿಗೂ ನಮಗೆ ಇರುವಂತಹದೇ ಹಕ್ಕುಗಳು ಸಿಗುವುವು ಮತ್ತು ನವ
ಮೇಲಿನ ಕರ್ತವ್ಯಗಳೆಲ್ಲವೂ ಅವರ ಪಾಲಿಗೂ ಕರ್ತವ್ಯಗಳಾಗುವುವು. ಇನ್ನೊಂ
ಸಂದರ್ಭದಲ್ಲಿ ಪ್ರವಾದಿ ಮುಹಮ್ಮದ್(ಸ) ಅವರು ಇನ್ನಷ್ಟು ಸ್ಪಷ್ಟವಾ
ಹೇಳಿದರು: ಕೇಳಿರಿ! ನಿಮ್ಮ ದೇವನು ಒಬ್ಬನೇ, ನಿಮ್ಮ ತಂದೆಯೂ(ಆದಮ
ಒಬ್ಬನೇ. ಯಾವುದೇ ಅರಬ್ ಪ್ರಜೆಗೆ ಅರಬೇತರರಿಗಿಂತ ಹೆಚ್ಚಿನ ಮೇಲ್ಮೆ ಇಲ್ಲ
ಕರಿಯನಿಗೆ ಬಿಳಿಯನೆದುರಾಗಲೀ ಬಿಳಿಯನಿಗೆ ಕರಿಯನೆದುರಾಗಲೀ ಯಾವು
ಮೇಲ್ಮೆ ಇಲ್ಲ. ಮೇಲ್ಮೆ ಏನಿದ್ದರೂ ಕೇವಲ ದೇವಭಕ್ತಿಯ ಆಧಾರದಲ್ಲಿ ಮಾತ್ರ
ನಿಮ್ಮ ಪೈಕಿ ಅತಿ ಹೆಚ್ಚು ಸತ್ಯಸಂಧನಾಗಿರುವ ವ್ಯಕ್ತಿಯೇ ಅಲ್ಲಾಹನ ದೃಷ್ಟಿಯ
ಅತೀ ಹೆಚ್ಚು ಗೌರವಾನ್ವಿತನಾಗಿರುವನು.

9. ಇಸ್ಲಾಮ್ ಪ್ರತಿಪಾದಿಸುವ ಮೂಲಭೂತ ವಿಶ್ವಾಸಗಳ ಪೈಕಿ ದೇವ
ಮೇಲಿನ ವಿಶ್ವಾಸಕ್ಕೆ ಅತಿ ಹೆಚ್ಚಿನ ಆದ್ಯತೆ ಮತ್ತು ಅತ್ಯಂತ ಮಹತ್ವದ ಸ್ಥಾ
ಪ್ರಾಪ್ತವಿದೆ. ಈ ವಿಶ್ವಾಸದ ಪ್ರಕಾರ ದೇವನು ಅಸ್ತಿತ್ವದಲ್ಲಿರುವುದು ಮಾತ್ರವಲ್ಲ
ಅವನು ಏಕಮಾತ್ರನು, ಅವನೇ ಈ ವಿಶ್ವದ ಏಕೈಕ ಸೃಷ್ಟಿಕರ್ತನೂ ಒಡೆಯನ
ಅಧಿಪತಿಯೂ ಪ್ರಾಯೋಜಕನೂ ಆಗಿರುವನು. ಅವನು ಸ್ಥಾಪಿತವಾಗಿಟ್ಟಿ
ವುದರಿಂದಲೇ ಈ ವಿಶ್ವವು ಸ್ಥಾಪಿತವಾಗಿದೆ. ಅವನು ನಡೆಸುತ್ತಿರುವುದರಿಂದ
ಈ ವಿಶ್ವದ ವ್ಯವಸ್ಥೆ ನಡೆಯುತ್ತಿದೆ. ಈ ವಿಶ್ವದ ಪ್ರತಿಯೊಂದು ವಸ್ತುವಿಗೆ ಅ
ಸಕ್ರಿಯವಾಗಿರಲು ಅಗತ್ಯವಿರುವ ಆಹಾರ (Subsistence) ಅಥವಾ ಶಕ್ತಿಯನ
(Energy) ಅವನೇ ಒದಗಿಸುತ್ತಿದ್ದಾನೆ. ಪರಮಾಧಿಕಾರ ಅಥವಾ ಸಾರ್ವಭೌಮತ್ವ
ಎಲ್ಲ ಗುಣ, ವೈಶಿಷ್ಟ್ಯ ಮತ್ತು ಅರ್ಹತೆಗಳು ಅವನಲ್ಲಿವೆ. ಅದರಲ್ಲಿ ಯಾರಿಗ
ಎಳ್ಳಷ್ಟೂ ಅವನ ಜೊತೆ ಪಾಲುಗಾರಿಕೆ ಅಥವಾ ಸಹಭಾಗಿತ್ವವಿಲ್ಲ. ಆರಾಧ್ಯ
ಮತ್ತು ದೇವತ್ವದ (Divinity) ಎಲ್ಲ ಗುಣಗಳೂ ಅವನಲ್ಲಿದ್ದು, ಆ ಪೈ

ಯಾವುದೇ ಗುಣವು ಅವನ ಹೊರತು ಬೇರೆ ಯಾರಲ್ಲೂ ಇಲ್ಲ. ಸಂಪೂರ್ಣ ವಿಶ್ವವನ್ನು ಮತ್ತು ಅದರಲ್ಲಿರುವ ಪ್ರತಿಯೊಂದು ವಸ್ತುವನ್ನು ಅವನು ಏಕಕಾಲದಲ್ಲಿ ವೀಕ್ಷಿಸುತ್ತಿದ್ದಾನೆ. ವಿಶ್ವದ ಪ್ರತಿಯೊಂದು ವಸ್ತುವಿನ ವರ್ತಮಾನ, ಇತಿಹಾಸ ಮತ್ತು ಭವಿಷ್ಯದ ನೇರ ಹಾಗೂ ಸಂಪೂರ್ಣ ಜ್ಞಾನ ಅವನಿಗೆ ಇದೆ. ಇಂತಹ ಸರ್ವ ವೀಕ್ಷಕ, ಸರ್ವಜ್ಞ, ಸೂಕ್ಷ್ಮಜ್ಞ ಗುಣ ಅವನ ಹೊರತು ಬೇರಾರಲ್ಲೂ ಇಲ್ಲ. ಅವನು ಅನಾದಿ(ಎಂದೆಂದಿಗೂ ಇದ್ದವನು) ಮತ್ತು ಅನಂತ(ಎಂದೆಂದೂ ಇರುವವನು) ಆಗಿದ್ದಾನೆ. ಅವನ ಹೊರತು ಉಳಿದೆಲ್ಲವೂ ನಶ್ವರ. ಅವನು ಮಾತ್ರ ಸದಾ ಜೀವಂತ ಹಾಗೂ ಶಾಶ್ವತ ಅಸ್ತಿತ್ವವಾಗಿದ್ದಾನೆ. ಇಂತಹ ಶಾಶ್ವತತೆ ಅವನ ಹೊರತು ಬೇರಾರಲ್ಲೂ ಇಲ್ಲ. ಅವನು ಯಾರದೇ ಸಂತಾನವಲ್ಲ. ಅವನಿಂದ ಯಾವುದೇ ಸಂತಾನವಿಲ್ಲ.(ಅವನು ಯಾರಿಗೂ ಜನಿಸಿದವನಲ್ಲ, ಅವನಿಂದ ಯಾರೂ ಜನಿಸಿಲ್ಲ.) ಅವನ ಹೊರತು ವಿಶ್ವದಲ್ಲಿ ಇರುವ ಎಲ್ಲವೂ ಅವನಿಂದಲೇ ಸೃಷ್ಟಿಸಲ್ಪಟ್ಟಿವೆ. ವಿಶ್ವದಲ್ಲಿ ಯಾರೂ ಯಾವ ಸ್ತರದಲ್ಲೂ ಯಾವ ವಿಧದಲ್ಲೂ ವಿಶ್ವದೊಡೆಯ ನೆಂದಾಗಲಿ ಅವನಿಗೆ ಸಮಾನರೆಂದಾಗಲಿ ಅವನ ಪುತ್ರ ಅಥವಾ ಪುತ್ರಿ ಎಂದಾಗಲಿ ಕರೆಯಲ್ಪಡಲು ಅಥವಾ ಪರಿಗಣಿಸಲ್ಪಡಲು ಖಂಡಿತ ಅರ್ಹರಲ್ಲ. ಅವನೇ ಎಲ್ಲ ಮಾನವರ ನೈಜ ಆರಾಧ್ಯನಾಗಿದ್ದಾನೆ. ಆರಾಧನೆಯಲ್ಲಿ ಅವನ ಜೊತೆ ಇತರರನ್ನು ಸೇರಿಸುವುದು ಅಥವಾ ಅವನ ಹೊರತು ಅನ್ಯರನ್ನು ಆರಾಧಿಸುವುದು ಅತಿ ದೊಡ್ಡ ಪಾಪ ಮತ್ತು ಅತಿ ದೊಡ್ಡ ಕೃತಘ್ನತೆ(Infidality)ಯಾಗಿದೆ. ಮನುಷ್ಯನ ಪ್ರಾರ್ಥನೆಗಳನ್ನು ಆಲಿಸುವವನು ಅವನೇ. ಅವುಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಇರುವುದೂ ಅವನೊಬ್ಬನಿಗೆ ಮಾತ್ರ. ಅವನಿಂದ ಯಾಚಿಸದಿರುವುದು ಮತ್ತು ಪ್ರಾರ್ಥಿಸದಿರುವುದು ಅಹಂಕಾರವೆನಿಸುತ್ತದೆ. ಅವನ ಹೊರತು ಇತರರನ್ನು ಬೇಡುವುದು, ಪ್ರಾರ್ಥಿಸುವುದು, ಇತರರೂ ದೇವರೆಂದು ಅಥವಾ ದೇವತ್ವದ ಸಹಭಾಗಿಗಳೆಂದು ಭಾವಿಸುವುದು 'ಬಹುದೇವಾರಾಧನೆ'(ಶಿರ್ಕ್) ಎನಿಸಿಕೊಳ್ಳುತ್ತದೆ.

10. ಇಸ್ಲಾಮಿನ ದೃಷ್ಟಿಯಲ್ಲಿ ದೇವನ ಪ್ರಭುತ್ವವು ಕೇವಲ ಪಾರಲೌಕಿಕ ವಿಷಯಗಳಿಗೆ ಮಾತ್ರ ಸೀಮಿತವಾಗದೆ ರಾಜಕೀಯ ಮತ್ತು ಕಾನೂನಿನಂತಹ ವಿಷಯಗಳಿಗೂ ಅನ್ವಯಿಸುತ್ತದೆ. ಇತರ ಕ್ಷೇತ್ರಗಳಂತೆ ಈ ಕ್ಷೇತ್ರದಲ್ಲೂ ಅವನಿಗೆ

ಯಾರೂ ಸಹಭಾಗಿಗಳಿಲ್ಲ, ಅವನು ಸೃಷ್ಟಿಸಿದ ಭೂಮಿ ಮತ್ತು ಮನುಷ್ಯ ವರ್ಗ
ಮೇಲೆ ಅಧಿಕಾರ ಚಲಾಯಿಸುವ ಹಕ್ಕು ರಾಜರಿಗಾಗಲಿ ರಾಜವಂಶಗಳಿಗಾಗ
ಪ್ರಭು ವರ್ಗಗಳಿಗಾಗಲಿ ಯಾವುದೇ ವ್ಯಕ್ತಿಗಳಿಗಾಗಲಿ ಜನರ ಪ್ರಭು
(Sovereignty of the people)ವನ್ನು ನೆಚ್ಚಿದ ಪ್ರಜಾಸತ್ತೆಗಾಗಲಿ ಯಾರಿಗ
ಇಲ್ಲ. ಆ ಹಕ್ಕು ಅವನೊಬ್ಬನಿಗೇ ಸೀಮಿತ. ದೇವ ವ್ಯವಸ್ಥೆಯನ್ನು ಬಿಟ್ಟು 'ಸ್ವತಂ
ರಾಗುವವರು ವಿದ್ರೋಹಿಗಳೆನಿಸಿಕೊಳ್ಳುತ್ತಾರೆ. ಹಾಗೆಯೇ ಇತರ 'ವ್ಯವಸ್ಥೆ' ಗಳನ
ಅಂಗೀಕರಿಸಿ ಅನುಸರಿಸುವವರು ಮತ್ತು ದೇವ ವ್ಯವಸ್ಥೆಯ ಅಧಿಕಾರ ವ್ಯಾಪ್ತಿಯನ
(Jurisdiction) ಕೇವಲ ವ್ಯಕ್ತಿ ನಿಯಮಗಳಿಗೆ(Personal Law) ಮತ್ತುಕೆಲ
ಧಾರ್ಮಿಕ ಆಚಾರಗಳಿಗೆ ಮಾತ್ರ ಸೀಮಿತಗೊಳಿಸುವ ಸಂಸ್ಥೆ ಅಥವಾ ವ್ಯಕ್ತಿಗ
ಕೂಡಾ ವಿದ್ರೋಹಿ ಗಳೆನಿಸಿಕೊಳ್ಳುತ್ತಾರೆ. ನಿಜವಾಗಿ ಅವನಿಂದ ಸೃಷ್ಟಿಸಲ್ಪಟ್ಟ ಭೂ
ಯಲ್ಲಿರುವ ಮಾನವರಿಗೆ ಜೀವನ ನಿಯಮಗಳನ್ನು ಕೊಡಬೇಕಾದವನು (La
giver) ಅವನು ಮಾತ್ರ. ಅದು ಅವನೊಬ್ಬನಿಂದ ಮಾತ್ರ ಸಾಧ್ಯ. ಅವನ ಪರಮೋ
ಅಧಿಕಾರವನ್ನು(Supreme Authority) ಪ್ರಶ್ನಿಸುವ ಹಕ್ಕು ಯಾರಿಗೂ ಇಲ್ಲ

11. ದೇವನ ಬಗ್ಗೆ ಇಸ್ಲಾಮ್ ಧರ್ಮವು ಪ್ರಸ್ತುತ ಕಲ್ಪನೆಗಳನ
ಪ್ರತಿಪಾದಿಸಿರುವುದರಿಂದ ಸ್ವಾಭಾವಿಕವಾಗಿ ಈ ಕೆಳಗಿನ ಅಂಶಗಳನ
ಅಂಗೀಕರಿಸುವುದು ಅನಿವಾರ್ಯವಾಗುತ್ತದೆ-

(ಅ) ದೇವನೊಬ್ಬನು ಮಾತ್ರ ಮನುಷ್ಯನ ನೈಜ ಆರಾಧ್ಯನಾಗಿದ್ದು ಅವ
ಮಾತ್ರ ಆರಾಧನೆಗೆ ಯೋಗ್ಯನಾಗಿರುವನು. ಅವನ ಹೊರತು ಇನ್ನಾರ
ಆರಾಧಿಸಲ್ಪಡುವ ಅರ್ಹತೆಯೇ ಉಳ್ಳವರಲ್ಲ.

(ಆ) ಅವನೊಬ್ಬನೇ ಎಲ್ಲ ಶಕ್ತಿ-ಸಾಮರ್ಥ್ಯಗಳ ಒಡೆಯನಾಗಿದ್ದಾ
ಮಾನವನ ಪ್ರಾರ್ಥನೆಗಳನ್ನು ಈಡೇರಿಸುವ ಅಥವಾ ಈಡೇರಿಸದಿರುವ ಸಂಪೂ
ಅಧಿಕಾರ ಅವನಿಗಿದೆ. ಆದ್ದರಿಂದ ಮನುಷ್ಯನು ಅವನನ್ನು ಮಾತ್ರ ಪ್ರಾರ್ಥಿಸಬೇಕ
ಅವನ ಹೊರತು ಇತರರನ್ನು ಕೂಡಾ ಪ್ರಾರ್ಥಿಸಬಹುದೆಂಬ ಆಲೋಚನೆಯನ
ಅವನು ಮಾಡಬಾರದು.

(ಇ) ಮನುಷ್ಯನ ವಿಧಿಯ(Destiny) ಒಡೆಯ ಅವನೊಬ್ಬನು ಮಾತ
ಅವನ ಹೊರತು ಇನ್ನಾರಿಗೂ ಮನುಷ್ಯನ ವಿಧಿಯನ್ನು ಉತ್ತಮಗೊಳಿಸು

ಅಥವಾ ಕೆಡಿಸುವ ಸಾಮರ್ಥ್ಯ ಇಲ್ಲ. ಆದ್ದರಿಂದ ಮನುಷ್ಯನ ನಿರೀಕ್ಷೆ ಮತ್ತು ಭಯ ಎರಡೂ ದೇವನೊಬ್ಬನಲ್ಲೇ ಕೇಂದ್ರಿಕೃತವಾಗಿರಬೇಕು. ಅವನ ಹೊರತು ಇತರ ಯಾರಿಂದಲೂ ಏನನ್ನೂ ನಿರೀಕ್ಷಿಸಬಾರದು. ಅವನ ಹೊರತು ಇತರ ಯಾರಿಗೂ ಅಂಜಬಾರದು.

(ಈ) ಮಾನವ ಮತ್ತು ಅವನ ಸುತ್ತಮುತ್ತವುಳ್ಳ ಜಗತ್ತಿನ ಎಲ್ಲ ಚರಾಚರ ವಸ್ತುಗಳ ಸೃಷ್ಟಿಕರ್ತ ಮತ್ತು ಒಡೆಯ ಅವನೊಬ್ಬನೇ. ಆದ್ದರಿಂದ ಮನುಷ್ಯನ ವಾಸ್ತವಿಕತೆ ಮತ್ತು ಸಕಲ ವಿಶ್ವದ ಎಲ್ಲ ವಿಷಯಗಳ ನೇರ ಹಾಗೂ ಸಂಪೂರ್ಣ ಜ್ಞಾನ ಇರುವುದು ಅವನೊಬ್ಬನಿಗೆ ಮಾತ್ರ. ಜೀವನದ ಸಂಕೀರ್ಣ(Complicated) ದಾರಿಗಳಲ್ಲಿ ಮನುಷ್ಯನಿಗೆ ಸೂಕ್ತ ಮಾರ್ಗದರ್ಶನ ಮಾಡಬಲ್ಲವನು ಮತ್ತು ಅವನಿಗೆ ಸರಿಯಾದ ಜೀವನ ನಿಯಮಗಳನ್ನು ಕೊಡಬಲ್ಲವನು ಆ ದೇವನು ಮಾತ್ರ.

(ಉ) ದೇವನೇ ಮನುಷ್ಯನ ಮತ್ತು ಈ ಭೂಮಿಯ ಸೃಷ್ಟಿಕರ್ತನೂ ಒಡೆಯನೂ ಅಧಿಪತಿಯೂ ಆಗಿರುವುದರಿಂದ ಮನುಷ್ಯನ ಮೇಲೆ ಇತರರು ಅಥವಾ ಸ್ವತಃ ಮನುಷ್ಯನು ತನ್ನ ಒಡೆತನ ಮತ್ತು ಆಧಿಪತ್ಯ ಮೆರೆಯುವುದು ಶುದ್ಧಾಂಗ 'ಕುಫ್ರ್'(Blasphemy) ಆಗಿದೆ. ಇದೇ ರೀತಿ, ಮನುಷ್ಯನು ಸ್ವತಃ ನಿಯಮ ನಿರ್ಮಾಪಕ (Law giver) ನಾಗುವುದು ಅಥವಾ ಇತರ ಯಾವುದಾದರೂ ವ್ಯಕ್ತಿ ಯಾ ಸಂಸ್ಥೆಗೆ ಅಂತಹ ಅಧಿಕಾರ ಇದೆ ಎಂದು ಅಂಗೀಕರಿಸುವುದು ಕೂಡಾ ಕುಫ್ರ್'(ದೇವಧಿಕ್ಕಾರ)ಗೆ ಸಮಾನವಾಗಿದೆ. ತನ್ನ ಸೃಷ್ಟಿ ಮತ್ತು ತನ್ನ ಭೂಮಿಯಲ್ಲಿ ಒಡೆತನ, ಆಧಿಪತ್ಯಗಳನ್ನು ಮೆರೆಯುವ ಹಾಗೂ ಅದಕ್ಕೆ ಕಾನೂನು, ನಿಯಮಗಳನ್ನು ಕೊಡುವ ಅಧಿಕಾರವಿರುವುದು ದೇವನೊಬ್ಬನಿಗೆ ಮಾತ್ರ.

(ಊ) ದೇವನೇ ಪರಮೋಚ್ಚ ಅಧಿಕಾರವುಳ್ಳವನಾದ್ದರಿಂದ -ಅವನ ಕಾನೂನಿಗೆ ಮಾತ್ರ ಪರಮೋಚ್ಚ ಕಾನೂನು (Supreme Law) ಎಂಬ ಸ್ಥಾನಮಾನ ಪ್ರಾಪ್ತವಾಗುತ್ತದೆ. ಹೀಗಿರುತ್ತಾ ಮನುಷ್ಯನ ಕಾನೂನು ನಿರ್ಮಾಣದ(Legislation) ಹಕ್ಕು ಬಹಳ ಸೀಮಿತವಾಗಿದ್ದು, ಕೇವಲ ಆ ದಿವ್ಯ, ಪರಮೋಚ್ಚ ಕಾನೂನಿಗೆ ಅಧೀನರಾದ, ಅದರ ಆಧಾರದಲ್ಲೇ ರೂಪಿಸಿದ ಮತ್ತು ಅದರ ಪರಿಮಿತಿಗಳೊಳಗೆ ಮಾತ್ರ ಅವನು ಕಾನೂನುಗಳನ್ನು ರಚಿಸಬಹುದು.

12. ಈ ಹಂತದಲ್ಲಿ ಇಸ್ಲಾಮಿನ ದ್ವಿತೀಯ ಅತ್ಯಂತ ಪ್ರಾಮುಃ ವಿಶ್ವಾಸವನ್ನು ನಾವು ಪರಿಶೀಲಿಸಬೇಕಾಗಿದೆ. ಅದುವೇ ಪ್ರವಾದಿತ್ವಕ್ಕೆ ಸಂಬಂಧಿಸಿ ವಿಶ್ವಾಸ. ಯಾವ ವ್ಯಕ್ತಿಯ ಮೂಲಕ ಅಲ್ಲಾಹನು ತನ್ನ ಕಾನೂನುಗಳ ಮನುಷ್ಯರಿಗೆ ತಲುಪಿಸುತ್ತಾನೋ ಅವನೇ ಪ್ರವಾದಿ. ನಮಗೆ ಆ ಕಾನೂ ಪ್ರವಾದಿಗಳ ಮೂಲಕ ಎರಡು ರೂಪದಲ್ಲಿ ಸಿಗುತ್ತದೆ. ಮೊದಲನೆಯ ದೇವವಾಣಿ. ಅಂದರೆ, ಸಾಕ್ಷಾತ್ ದೇವನಿಂದಲೇ ಅವತೀರ್ಣಗೊಂಡ ಅವ ಸಂದೇಶವಾದ ಪವಿತ್ರ ಕುರ್‌ಆನ್. ಎರಡನೆಯದು ದೇವ ಪ್ರವಾದಿಯ ದೇವಾದೇಶದಂತೆ ತನ್ನ ಮಾತು, ಕೃತಿ, ಆದೇಶ, ನಿಷೇಧಗಳ ಮೂಲಕ ತ ಅನುಯಾಯಿಗಳಿಗೆ ಕಲಿಸಿಕೊಟ್ಟ ವಿಷಯಗಳು ಅಂದರೆ ಸುನ್ನತ್. ಪ್ರವಾದಿ ಮತ್ತು ಸುನ್ನತ್‌ನ ಮೇಲಿನ ನಂಬಿಕೆಗೆ ಇಷ್ಟು ಮೂಲಭೂತ ಸ್ಥಾನಮಾನ ಹಾಗ ಮಹತ್ವ ಇರಲು ಕಾರಣವೇನೆಂದರೆ, ಇದಿಲ್ಲದಿದ್ದರೆ ದೇವನ ಮೇಲಿನ ನಂಬಿಕೆಯ ಕೇವಲ ಒಂದು ತಾತ್ವಿಕ (Theoretical) ನಂಬಿಕೆ ಮತ್ತು ಭ್ರಮೆಯಾಗಿ ಮಾ ಉಳಿದುಬಿಡುತ್ತದೆ. ಪ್ರವಾದಿಯ ವೈಚಾರಿಕ (Ideological) ಮತ್ತು ಪ್ರಾಯೋ (Practical) ಮಾರ್ಗದರ್ಶನ ಮಾತ್ರವೇ ಏಕದೇವತ್ವದ ನಂಬಿಕೆಯನ್ನು ಒಂ ನಾಗರಿಕತೆಯಾಗಿ, ಸಂಸ್ಕೃತಿಯಾಗಿ, ಜೀವನ ಕ್ರಮವಾಗಿ ಮತ್ತು ಒಂದು ಸಂಪೂರ್ಣ ವ್ಯವಸ್ಥೆಯಾಗಿ ರೂಪಿಸುತ್ತದೆ. ನಮಗೆ ಕಾನೂನು-ನಿಯಮಗಳು ದೊರೆಯುವು ಪ್ರವಾದಿಯ ಮೂಲಕ ಮಾತ್ರ. ಆ ಕಾನೂನುಗಳ ಅಭೀಷ್ಟದಂತೆ ಒಂದು ಜೀವ ವ್ಯವಸ್ಥೆಯನ್ನು ಸ್ಥಾಪಿಸಿ ತೋರಿಸುವುದು ಕೂಡಾ ಪ್ರವಾದಿಯೇ. ಆದ್ದರಿಂ ಏಕದೇವತ್ವದ ಮೇಲೆ ವಿಶ್ವಾಸವಿಟ್ಟ ಬಳಿಕ ಒಬ್ಬ ವ್ಯಕ್ತಿ ಪ್ರವಾದಿತ್ವದ ಮೇ ವಿಶ್ವಾಸವಿಡದಿದ್ದರೆ ಅವನು ನಿಜಾರ್ಥದಲ್ಲಿ 'ಮುಸ್ಲಿಮ್' ಎನಿಸಿಕೊಳ್ಳ ಅನರ್ಹನಾಗುತ್ತಾನೆ.

13. ಇಸ್ಲಾಮಿನಲ್ಲಿ ಪ್ರವಾದಿಗಳ ಸ್ಥಾನಮಾನವನ್ನು ಎಷ್ಟು ಸ್ಪಷ್ಟವಾ ವಿವರಿಸಲಾಗಿದೆ ಎಂದರೆ, ನಮಗೆ ಪ್ರವಾದಿಗಳು ಏನೆಲ್ಲಾ ಆಗಿರುತ್ತಾರೆ ಮತ ಏನೆಲ್ಲಾ ಆಗಿರುವುದಿಲ್ಲ ಎಂಬುದನ್ನು ಕರಾರುವಾಕ್ಕಾಗಿ ತಿಳಿದುಕೊಳ್ಳಲು ಸಾಧ್ಯವಿ

ಪ್ರವಾದಿಯು ಜನರನ್ನು ತನ್ನ ದಾಸ್ಯಕ್ಕಲ್ಲ; ಸಾಕ್ಷಾತ್ ದೇವನ ದಾಸ್ಯ ಒಳಪಡಿಸುವ ಉದ್ದೇಶದಿಂದ ನಿಯುಕ್ತರಾಗುತ್ತಾರೆ. ಅವರು ಸ್ವತಃ ತಾನ

ಅಲ್ಲಾಹನ ಒಬ್ಬ ದಾಸರೆಂಬುದನ್ನು ಸ್ಪಷ್ಟವಾಗಿ ಘೋಷಿಸುತ್ತಾರೆ. ನಮಾಝ್‌ನಲ್ಲಿ ದಿನನಿತ್ಯ ಕನಿಷ್ಠ 17 ಬಾರಿ ಓದಬೇಕೆಂದು ಪ್ರವಾದಿ ಮುಹಮ್ಮದ್(ಸ) ಕಲಿಸಿರುವ ತಶಹ್ಹುದ್‌ನಲ್ಲಿ "ಅಶ್‌ಹದು ಅನ್ನ ಮುಹಮ್ಮದನ್ ಅಬ್ದುಹೂ ವರಸೂಲುಹೂ" ಅರ್ಥಾತ್- "ಮುಹಮ್ಮದ್(ಸ) ಅಲ್ಲಾಹನ ದಾಸನೂ ಆತನ ಪ್ರವಾದಿಯೂ ಆಗಿರುವರೆಂದು ನಾನು ಸಾಕ್ಷ್ಯ ವಹಿಸುತ್ತೇನೆ" ಎಂಬ ವಾಕ್ಯವನ್ನು ತಪ್ಪದೆ ಓದಲಾಗುತ್ತದೆ. ಪ್ರವಾದಿಯೂ ಒಬ್ಬ ಮನುಷ್ಯರಾಗಿರುತ್ತಾರೆ ಮತ್ತು ದೇವತ್ವ (Divivity)ದಲ್ಲಿ ಅವರಿಗೆ ಕಿಂಚಿತ್ತೂ ಪಾಲು ಇರುವುದಿಲ್ಲ ಎಂಬುದನ್ನು ಪವಿತ್ರ ಕುರ್‌ಆನ್ ಎಳ್ಳಷ್ಟೂ ಸಂದೇಹಕ್ಕೆ ಎಡೆ ಇಲ್ಲದಂತೆ ಬಹಳ ಸ್ಪಷ್ಟವಾಗಿ ಸಾರುತ್ತದೆ. ಹಾಗೆಯೇ, ಪ್ರವಾದಿಯು ಅತಿಮಾನವನಾಗಿರುವುದಿಲ್ಲ. ಮಾನವ ಸಹಜ ದೌರ್ಬಲ್ಯಗಳಿಂದ ಮುಕ್ತನಾಗಿರುವುದಿಲ್ಲ, ದೇವ ಭಂಡಾರಗಳ ಒಡೆಯನಾಗಿರುವುದಿಲ್ಲ, ದೇವನಂತೆ ಅವರು ಪರೋಕ್ಷದ ಜ್ಞಾನ ಉಳ್ಳವನಾಗಲೀ ಸರ್ವಜ್ಞನಾಗಲೀ ಆಗಿರುವುದಿಲ್ಲ. ಅವರು ಇತರರಿಗೆ ಲಾಭ-ನಷ್ಟಗಳನ್ನುಂಟು ಮಾಡುವುದಾಗಿರಲಿ, ಸ್ವತಃ ತನಗೆ ಏನಾದರೂ ಲಾಭ-ನಷ್ಟಗಳನ್ನುಂಟು ಮಾಡುವ ಅಧಿಕಾರವಾಗಲಿ ಹೊಂದಿರುವುದಿಲ್ಲ. ಅವರ ಕೆಲಸ ಸಂದೇಶ ತಲಪಿಸುವುದು ಮಾತ್ರ. ಯಾರನ್ನಾದರೂ ಸರಿದಾರಿಗೆ ತರಲೇಬೇಕೆಂಬ ಹೊಣೆಗಾರಿಕೆಯಾಗಲಿ ಅಧಿಕಾರವಾಗಲಿ ಅವರಿಗಿಲ್ಲ. ಹಾಗೆಯೇ ಸನ್ಮಾರ್ಗವನ್ನು ತಿರಸ್ಕರಿಸುವವರ ವಿಚಾರಣೆ ನಡೆಸುವ ಅಥವಾ ಅವರ ಮೇಲೆ ದೇವಯಾತನೆಯನ್ನು ಅವತರಿಸಿ ಬಿಡುವ ಅಧಿಕಾರವೂ ಅವರ ಕೈಯಲ್ಲಿಲ್ಲ. ಅವರು ಸ್ವತಃ ದೇವಾಜ್ಞೆಗಳನ್ನು ಉಲ್ಲಂಘಿಸಿದರೆ(ಮಆದಲ್ಲಾಹ್) ತಾನೇ ಏನನ್ನಾದರೂ ರಚಿಸಿ ಇದು ದೇವಾದೇಶ ಎಂದು ಜನರನ್ನು ನಂಬಿಸ ಹೊರಟರೆ ಅಥವಾ ದೇವವಾಣಿಯಲ್ಲಿ ಕಿಂಚಿತ್ತಾದರೂ ಬದಲಾವಣೆ ಮಾಡಲು ಪ್ರಯತ್ನಿಸಿದರೆ ಅವರು ಅಲ್ಲಾಹನ ಶಿಕ್ಷೆಯಿಂದ ಪಾರಾಗುವಂತಿಲ್ಲ. ಪ್ರವಾದಿ ಮುಹಮ್ಮದ್(ಸ) ದೇವನ ಪ್ರವಾದಿಗಳ ಪೈಕಿ ಒಬ್ಬರಾಗಿದ್ದೂ ಪ್ರವಾದಿತ್ವಕ್ಕಿಂತ ಹೆಚ್ಚಿನ ಯಾವುದೇ ವೈಶಿಷ್ಟ್ಯ ಅವರಲ್ಲಿರಲಿಲ್ಲ. ಮನಿಚ್ಛೆಯಂತೆ ಯಾವುದಾದರೂ ವಸ್ತುವನ್ನು ಹಲಾಲ್(ಸಮ್ಮತ) ಎಂದೋ ಹರಾಮ್ (ನಿಷಿದ್ಧ) ಎಂದೋ ಘೋಷಿಸುವ ಅಥವಾ ದೇವಾನುಮತಿ ಇಲ್ಲದೆ ಸ್ವತಃ ಕಾನೂನು ನಿಯಮಗಳನ್ನು ನಿರ್ಮಿಸುವ ಅಧಿಕಾರ ಅವರಿಗೆ ಇರಲಿಲ್ಲ.

ದೇವನ ವತಿಯಿಂದ ವಹ್ಯ್(ದಿವ್ಯವಾಣಿ) ಮೂಲಕ ಅವತೀರ್ಣಗೊಳ್ಳು
ಆದೇಶಗಳನ್ನು ಅನುಸರಿಸುವುದು ಮಾತ್ರ ಅವರ ಕರ್ತವ್ಯವಾಗಿತ್ತು ಎಂದು ಪವಿ
ಕುರ್‌ಆನ್ ವ್ಯಕ್ತವಾಗಿ ಹೇಳಿದೆ.

ಈ ರೀತಿ ಇಸ್ಲಾಮ್, ಮಾನವಕುಲವನ್ನು ಪ್ರವಾದಿ ಮುಹಮ್ಮದ್(
ಅವರಿಗಿಂತ ಮುಂಚೆ ಆಗಮಿಸಿದ ಪ್ರವಾದಿಗಳ ಬಗ್ಗೆ ಅವರ ಅನುಯಾಯಿಗ
ಮಾಡಿದಂತಹ ಎಲ್ಲ ಉತ್ಪ್ರೇಕ್ಷೆ ಹಾಗೂ ಅತಿಶಯಗಳಿಂದ ರಕ್ಷಿಸಿದೆ. ಹಿಂದಿ
ಹಲವು ಪ್ರವಾದಿಗಳನ್ನು ಅವರ ಅನಂತರದ ಅನುಯಾಯಿಗಳು ಅತಿಯಾ
ಹೊಗಳುತ್ತಾ ಕೊನೆಗೆ ದೇವ ಸಮಾನರೆಂದೂ ದೇವಪುತ್ರರೆಂದೂ ದೇವ
ಅವತಾರವೆಂದೂ ಸಾಕ್ಷಾತ್ ದೇವರೆಂದೂ ಸಾರಿಬಿಡುವಷ್ಟು ಉತ್ಪ್ರೇಕ್ಷೆಗೆ ಬ
ಕೊಟ್ಟಿದ್ದರು. ಇಂತಹ ಎಲ್ಲ ಅತಿಶಯಗಳನ್ನು ವಿರೋಧಿಸಿರುವ ಇಸ್ಲಾಮ
ಪ್ರವಾದಿಗಳ ನೈಜ ಸ್ಥಾನಮಾನವನ್ನು ಸ್ಪಷ್ಟಪಡಿಸಿದೆ. ಪ್ರವಾದಿಯ ಮೇ
ವಿಶ್ವಾಸವಿಡುವ ತನಕ ಯಾರೂ 'ಮುಅ್‌ಮಿನ್'(ಸತ್ಯವಿಶ್ವಾಸಿ) ಆಗಲು ಸಾಧ್ಯವಿ
ಪ್ರವಾದಿಯನ್ನು ಅನುಸರಿಸುವುದೆಂದರೆ ದೇವನನ್ನು ಅನುಸರಿಸುವುದಕ್ಕೆ ಸಮಾನವಾಗಿ
ಏಕೆಂದರೆ ದೇವನು ಪ್ರವಾದಿಗಳನ್ನು ಕಳುಹಿಸುವುದೇ ಅನುಸರಿಸಲ್ಪಡಲಿಕ್ಕಾ
ಪ್ರವಾದಿಯ ಅನುಸರಣೆ ಮಾಡುವವರು ಮಾತ್ರ ಸನ್ಮಾರ್ಗವನ್ನು ಪಡೆಯುವ
ಪ್ರವಾದಿ ಯಾವುದನ್ನು ಮಾಡಬೇಕು ಎಂದು ಆದೇಶಿಸುವರೋ ಅದನ್ನು ಮಾಡ
ಬೇಕು. ಯಾವುದನ್ನು ಮಾಡಬಾರದು ಎನ್ನುತ್ತಾರೋ ಅದನ್ನು ವರ್ಜಿಸಲೇಬೇ
(ಇದನ್ನು ಸ್ವತಃ ಪ್ರವಾದಿವರ್ಯರೇ ಸ್ಪಷ್ಟಪಡಿಸಿದ್ದು, ನಾನೊಬ್ಬ ಬಶೀ
(ಸುವಾರ್ತೆ ಕೊಡುವವ) ಆಗಿರುವೆನು. ನಿಮ್ಮ ಧರ್ಮದ ವಿಷಯದಲ್ಲಿ ನಾ
ಕೊಡುವ ಎಲ್ಲ ಆದೇಶಗಳನ್ನು ಪಾಲಿಸಿರಿ. ನಾನು ನನ್ನ ಅಭಿಪ್ರಾಯದ
ಏನಾದರೂ ಹೇಳಿದರೆ ನಾನು ಒಬ್ಬ ಬಶರ್ (ಮನುಷ್ಯ) ಎಂಬುದು ನಿಮ
ತಿಳಿದಿರಲಿ. ನಿಮ್ಮ ಲೌಕಿಕ ವಿಚಾರಗಳ ಬಗ್ಗೆ ನಿಮಗೇ ಹೆಚ್ಚು ತಿಳಿದಿದೆ ಎಂ
ಹೇಳಿರುವರು.) ಪ್ರವಾದಿ ಮುಹಮ್ಮದ್ (ಸ) ಅವರ ಜೀವನಾದರ್ಶ (ಸುನ್ನ
ನಿಜವಾಗಿ ಪವಿತ್ರ ಕುರ್‌ಆನಿನ ಇಂಗಿತಗಳ ವಿಶ್ಲೇಷಣೆ ಅಥವಾ ವ್ಯಾಖ್ಯಾನವಾಗಿ
ಈ ವಿಶ್ಲೇಷಣೆಯನ್ನು ಅವರಿಗೆ ಪವಿತ್ರ ಕುರ್‌ಆನಿನ ಸಾಕ್ಷಾತ್ ನಿರ್ಮಾತೃ ಆಗಿರು
ಅಲ್ಲಾಹನೇ ಕಲಿಸಿಕೊಟ್ಟಿರುವನು. ಆದ್ದರಿಂದ ಈ ವ್ಯಾಖ್ಯಾನಕ್ಕೆ ದೇವನ ಅಂಗೀಕ

ಮುದ್ರೆ (Divine approval) ಇದ್ದು, ಅದಕ್ಕಿಂತ ಭಿನ್ನವಾಗಿ ಸ್ವೇಚ್ಛೆಯಂತೆ ಪವಿತ್ರ ಕುರ್‌ಆನನ್ನು ವಿಶ್ಲೇಷಿಸುವ ಹಕ್ಕು ಯಾರಿಗೂ ಇಲ್ಲ. ಅಲ್ಲಾಹನು ಪ್ರವಾದಿಯ ಬದುಕನ್ನು ಎಲ್ಲರ ಪಾಲಿಗೆ ಆದರ್ಶ ಹಾಗೂ ಮಾದರೀಯೋಗ್ಯ ಎದುಕೆಂದು ಸಾರಿರುವನು. ಪ್ರವಾದಿಯ ತೀರ್ಮಾನಗಳನ್ನು ಅಂಗೀಕರಿಸುವ ತನಕ ಯಾರೂ ಮುಲ್‌ಮಿನ್(ಸತ್ಯವಿಶ್ವಾಸಿ) ಆಗಲು ಸಾಧ್ಯವಿಲ್ಲ. ಒಂದು ವಿಷಯದಲ್ಲಿ ಅಲ್ಲಾಹ್ ಮತ್ತು ಆತನ ಪ್ರವಾದಿಯು ಒಂದು ತೀರ್ಪು ಕೊಟ್ಟು ಬಿಟ್ಟ ಮೇಲೆ ಅದಕ್ಕೆ ಭಿನ್ನವಾಗಿ ತಾನೇ ಏನಾದರೂ ತೀರ್ಮಾನಿಸುವ ಅಧಿಕಾರ ಯಾವ ಸತ್ಯವಿಶ್ವಾಸಿಗೂ ಇಲ್ಲ. ಮಾತ್ರವಲ್ಲ, ಯಾವುದೇ ವಿಷಯದಲ್ಲಿ ಒಂದು ತೀರ್ಮಾನ ಕೈಗೊಳ್ಳುವ ಮುನ್ನ ಆ ಬಗ್ಗೆ ಅಲ್ಲಾಹ್ ಮತ್ತವನ ಪ್ರವಾದಿಯ ತೀರ್ಮಾನ ಏನು ಎಂಬುದನ್ನು ಗಣನೆಗೆ ತೆಗೆದುಕೊಳ್ಳದೆ ಇರುವುದು ಸತ್ಯವಿಶ್ವಾಸಿಗಳಿಗೆ ಭೂಷಣವಾದ ಗುಣವಲ್ಲ. ಮೇಲೆ ಹೇಳಲಾದ ವಾಸ್ತವಿಕತೆಗಳಿಂದ ವ್ಯಕ್ತವಾಗುವಂತೆ, ಅಲ್ಲಾಹನು ಮನುಷ್ಯನಿಗೆ ಕೇವಲ ಒಂದು ಪರಮೋಚ್ಚ ನಿಯಮವನ್ನು(Supreme Law) ಮಾತ್ರ ಕೊಡದೆ, ಅದರ ಜೊತೆಗೆ ಶಾಶ್ವತ ಮೌಲ್ಯಗಳನ್ನು(Permanent values) ಕೊಟ್ಟಿರುವನು. ಪವಿತ್ರ ಕುರ್‌ಆನಿನಲ್ಲಿ ಮತ್ತು ಪ್ರವಾದಿ ಆದರ್ಶದಲ್ಲಿ ಒಳಿತೆಂದು ಪರಿಗಣಿಸಲ್ಪಟ್ಟ ಎಲ್ಲ ವಿಷಯಗಳೂ ಶಾಶ್ವತವಾಗಿ ಒಳಿತುಗಳೆಂದೇ ಪರಿಗಣಿಸಲ್ಪಡುತ್ತದೆ. ಹಾಗೆಯೇ ಕುರ್‌ಆನ್ ಮತ್ತು ಸುನ್ನತ್‌ಗಳಲ್ಲಿ ಕೆಡುಕು ಎಂದು ಪರಿಗಣಿಸಲ್ಪಟ್ಟ ಎಲ್ಲ ವಸ್ತುಗಳೂ ಶಾಶ್ವತವಾಗಿ ಕೆಡುಕು ಎಂದೇ ಪರಿಗಣಿಸಲ್ಪಡುತ್ತದೆ. ಅವುಗಳು ಕಡ್ಡಾಯವೆಂದು ಸಾರಿದ ಎಲ್ಲವೂ ಶಾಶ್ವತವಾಗಿ ಕಡ್ಡಾಯವಾಗುತ್ತದೆ. ಅವುಗಳು ಧರ್ಮಬದ್ಧ(ಹಲಾಲ್)ಗೊಳಿಸಿದ ಎಲ್ಲ ವಸ್ತುಗಳೂ ಶಾಶ್ವತವಾಗಿ ಧರ್ಮಬದ್ಧವಾಗಿಯೇ ಇರುತ್ತವೆ. ಅವುಗಳು ನಿಷಿದ್ಧವೆಂದು ಗುರುತಿಸಿದ ಎಲ್ಲ ವಸ್ತುಗಳೂ ಶಾಶ್ವತವಾಗಿ ನಿಷಿದ್ಧವಾಗಿಯೇ ಇರುತ್ತವೆ. ಈ ಕಾನೂನು - ನಿಯಮ ಗಳಲ್ಲಿ ಯಾವುದೇ ತಿದ್ದುಪಡಿ, ಕಡಿತ, ಹೆಚ್ಚಳ, ರದ್ದತಿ ಇತ್ಯಾದಿಗಳನ್ನು ಮಾಡಲು ಯಾರಿಗೂ ಅಧಿಕಾರವಿಲ್ಲ. ಇಸ್ಲಾಮಿನಿಂದ ಹೊರಹೋಗುವ ನಿರ್ಧಾರ ಮಾಡಿದ ವ್ಯಕ್ತಿ, ಗುಂಪು ಅಥವಾ ಜನಾಂಗ ಮಾತ್ರ ಅದಕ್ಕೆ ಕೈ ಹಾಕಬಲ್ಲುದು. ಮುಸಲ್ಮಾನರು ಮುಸಲ್ಮಾನರಾಗಿರುವ ತನಕ, ಅವರ ಪಾಲಿಗೆ ನಿನ್ನೆ ಶರೀಅತ್‌ನಲ್ಲಿ ಕೆಟ್ಟದೆಂದು ಪರಿಗಣಿಸಲಾದ ಒಂದು ವಿಷಯ ಇಂದು ಒಳಿತಾಗಿ ಬಿಡುವುದಿಲ್ಲ.

ಇಂದು ಒಳಿತೆಂದು ಪರಿಗಣಿಸಲ್ಪಟ್ಟ ಯಾವುದೇ ವಿಷಯ ನಾಳೆ ಕೆಡುಕ
ಬಿಡುವುದಿಲ್ಲ. ಯಾವುದೇ ಕಿಯಾಸ್(ಊಹೆ) ಇಜ್ತಿಹಾದ್ (ತೀರ್ಪು) ಅಥ
ಇಜ್ಮಾಅ್‌ನ(ಸರ್ವಾನುಮತ) ಆಧಾರದಲ್ಲೂ ಕುರ್‌ಆನ್ ಮತ್ತು ಸುನ್ನತ್‌ಗಳ
ಕಿಂಚಿತ್ ಬದಲಾವಣೆ ಮಾಡಲು ಸಾಧ್ಯವಿಲ್ಲ.

14. ಪರಲೋಕ ವಿಶ್ವಾಸವು ಇಸ್ಲಾಮ್ ಪ್ರತಿಪಾದಿಸುವ, ತೃತೀ
ಮೂಲಭೂತ ನಂಬಿಕೆಯಾಗಿದೆ. ಈ ವಿಶ್ವಾಸಕ್ಕೆ ಎಷ್ಟು ಮಹತ್ವವಿದೆ ಎಂ
ಅದನ್ನು ನಿರಾಕರಿಸಿದವನು ಕಾಫಿರ್ ಎನಿಸಿಕೊಳ್ಳುತ್ತಾನೆ. ಒಬ್ಬನಿಗೆ ಅಲ್ಲಾಹ
ಅವನ ಸಂದೇಶವಾಹಕ, ಪವಿತ್ರ ಕುರ್‌ಆನ್ ಹೀಗೆ ಇತರೆಲ್ಲ ವಿಷಯಗಳ ಮೇ
ನಂಬಿಕೆಯಿದ್ದರೂ ಪರಲೋಕವೊಂದರ ಮೇಲೆ ನಂಬಿಕೆ ಇಲ್ಲದಿದ್ದರೆ ಆಗ
ಅವನು ಕಾಫಿರ್ ಎಂದೇ ಪರಿಗಣಿಸಲ್ಪಡುತ್ತಾನೆ. ಈ ವಿಶ್ವಾಸದ ಅನುಪಸ್ಥಿತಿಯ
ಬೇರಾವ ವಿಶ್ವಾಸವೂ ಅವನನ್ನು ಕುಫ್ರ್‌ನಿಂದ ರಕ್ಷಿಸದು. ವಿವರವಾಗಿ ನೋಡಿ
ಈ ವಿಶ್ವಾಸದಲ್ಲಿ 6 ಕಲ್ಪನೆಗಳು ಒಳಗೊಂಡಿವೆ;

(ಅ) ಲೋಕದಲ್ಲಿ ಮನುಷ್ಯನು ಹೊಣೆ ರಹಿತನಾಗಿ (Irresponsib
ಬದುಕ ಬೇಕಾದವನಲ್ಲ. ಅವನು ತನ್ನ ಸೃಷ್ಟಿಕರ್ತನೆದುರು ವಿಚಾರಣಾ
(Accountable) ನಾಗಿರುವನು. ಇಹಲೋಕದ ವರ್ತಮಾನ ಬದುಕು ಮನುಷ
ಪಾಲಿಗೆ ಒಂದು ಪರೀಕ್ಷೆಯಾಗಿದೆ. ಈ ಪರೀಕ್ಷೆ ಮುಗಿದೊಡನೆ ಅವನು ತ
ಕರ್ಮಗಳ ಲೆಕ್ಕ ಸಮರ್ಪಿಸಬೇಕಾಗುತ್ತದೆ.

(ಆ) ಮನುಷ್ಯನ ವಿಚಾರಣೆಗಾಗಿ ಅಲ್ಲಾಹನು ಒಂದು ದಿನವನ್ನು ನಿಶ್ಚಯಿ
ರುವನು. ಲೋಕದಲ್ಲಿ ಕರ್ಮಗಳನ್ನು ಮಾಡಲು ಮಾನವಕುಲಕ್ಕೆ ಅಲ್ಲಾಹ
ಒದಗಿಸಿರುವ ಕಾಲಾವಕಾಶ ಮುಗಿದೊಡನೆ ಪುನರುತ್ಥಾನ ದಿನ ಬಂದು ಬಿಡುವು
ಆ ವೇಳೆ ಜಗತ್ತಿನ ಈಗಿನ ಎಲ್ಲ ವ್ಯವಸ್ಥೆಗಳು ಸಂಪೂರ್ಣ ಅಸ್ತವ್ಯಸ್ತವ
ಬಿಡುವುವು. ಒಂದು ಹೊಸ ವಿಶ್ವ ವ್ಯವಸ್ಥೆ ಸ್ಥಾಪಿಸಲ್ಪಡುವುದು. ಆ ಹೊ
ಜಗತ್ತಿನಲ್ಲಿ ಈ ಲೋಕದ ಆರಂಭದಿಂದ ಅದರ ಅಂತ್ಯದ ತನಕ ಹುಟ್ಟಿದ ಎ
ಮನುಷ್ಯರನ್ನು ಪುನಃ ಜೀವಂತಗೊಳಿಸಲಾಗುವುದು.

(ಇ) ಅಂದು ಏಕಕಾಲದಲ್ಲಿ ಎಲ್ಲರನ್ನೂ ಅಲ್ಲಾಹನ ನ್ಯಾಯಾಲಯದ
ವಿಚಾರಣೆಗೆ ಒಳಪಡಿಸಲಾಗುವುದು, ಅಂದು ಪ್ರತಿಯೊಬ್ಬನೂ ಜಗತ್ತಿನಲ್ಲಿ ಎಸ

, ಕಾರ್ಯಗಳ ಬಗ್ಗೆ ದೇವನ ವಿಚಾರಣೆಗೆ ಉತ್ತರಿಸಬೇಕಾಗುವುದು.

(ಈ) ಅಂದು ಅಲ್ಲಾಹನು ಕೇವಲ ತನ್ನ ಜ್ಞಾನದ ಆಧಾರದಲ್ಲಿ ತೀರ್ಪು
ತಲಾರನು. ನ್ಯಾಯದ ಎಲ್ಲ ಶರತ್ತುಗಳನ್ನು ಅಂದು ಪೂರ್ತಿಗೊಳಿಸಲಾಗುವುದು.
ಯೊಬ್ಬನ ಎಲ್ಲ ಕರ್ಮಗಳ ಸಂಪೂರ್ಣ ದಾಖಲೆಯನ್ನು, ಎಳ್ಳಷ್ಟೂ ಹೆಚ್ಚು
ಮೆ ಇಲ್ಲದೆ ಆ ನ್ಯಾಯಾಲಯದ ಮುಂದೆ ಇಡಲಾಗುವುದು ಮತ್ತು ಗುಪ್ತವಾಗಿ
ಡಲಾದ, ವ್ಯಕ್ತವಾಗಿ ಮಾಡಲಾದ ಎಲ್ಲಾ ಕರ್ಮಗಳ ಬಗ್ಗೆಯೂ ಅವುಗಳ
ಏನ ಸಂಕಲ್ಪಗಳ ಮತ್ತು ವಿಚಾರಗಳ ಬಗ್ಗೆಯೂ ಸಕಲ ಸಾಕ್ಷ್ಯಾಧಾರಗಳನ್ನು
ಸ್ತಾರವಾಗಿ ಪ್ರಕಟಿಸಲಾಗುವುದು.

(ಉ) ಅಲ್ಲಾಹನ ನ್ಯಾಯಾಲಯದಲ್ಲಿ ಯಾವುದೇ ಲಂಚವಾಗಲಿ ಅಸಮರ್ಪಕ
ರಸ್ಸುಗಳಾಗಲಿ, ಅನ್ಯಾಯದ ವಕಾಲತ್ತುಗಳಾಗಲಿ ನಡೆಯಲಾರವು. ಯಾರದೇ
ಭಾರವನ್ನು ಇನ್ನೊಬ್ಬರ ಮೇಲೆ ಹೊರಿಸಲಾಗದು. ಸ್ವನಿರ್ಮಿತ ಆರಾಧ್ಯರಾಗಲಿ,
ಂತ ನಿಕಟ ಸಂಬಂಧಿಕರಾಗಲಿ, ಮಿತ್ರರಾಗಲಿ, ನಾಯಕರಾಗಲಿ ಯಾರೂ ಆ
ಯಾರಿಗೂ ಸಹಾಯ ಮಾಡಲಾರರು. ಅಂದು ಅಲ್ಲಿ ಮನುಷ್ಯನು ಒಬ್ಬಂಟಿ
ಗಿ, ಅತ್ಯಂತ ಅಸಹಾಯಕ ಸ್ಥಿತಿಯಲ್ಲಿ ತನ್ನ ಕರ್ಮಕಾಂಡವನ್ನು ವಿವರಿಸಲಿರುವನು.
ನ ಬಗ್ಗೆ ಯಾವುದೇ ತೀರ್ಪು ಕೊಡುವ ಹಕ್ಕು ಅಲ್ಲಾಹನಿಗೆ ಮಾತ್ರ ಇರುವುದು.

(ಊ) ಅಂದಿನ ತೀರ್ಪು ಸಂಪೂರ್ಣವಾಗಿ, ಮನುಷ್ಯನು ಈ ಲೋಕದ ತನ್ನ
ನದಲ್ಲಿ ಪ್ರವಾದಿಗಳು ತೋರಿಸಿ ಹೋದ ದಿವ್ಯ ಸತ್ಯವನ್ನು ಅಂಗೀಕರಿಸಿ,
ಲೋಕದಲ್ಲಿ ವಿಚಾರಣೆ ಎದುರಿಸಲಿಕ್ಕಿದೆ ಎಂಬ ಪ್ರಜ್ಞೆಯೊಂದಿಗೆ, ಸರಿಯಾಗಿ
ನ ದಾಸ್ಯಾರಾಧನೆ ಮಾಡುತ್ತಾ ಬದುಕಿದ್ದನೋ ಇಲ್ಲವೊ ಎಂಬುದನ್ನು
ಲಂಬಿಸಿರುವುದು. ಅವನು ಆ ರೀತಿ ಬದುಕಿದ್ದರೆ ಅವನಿಗೆ ಸ್ವರ್ಗ ಸಿಗುವುದು.
ಥಾ ನರಕವೇ ಅವನ ನೆಲೆಯಾಗುವುದು.

15. ಈ ಲೋಕದಲ್ಲಿ ಮೂರು ವರ್ಗದ ಜನರ ಜೀವನ ವಿಧಾನಗಳು
ರು ವಿಭಿನ್ನ ರೂಪಗಳನ್ನು ತಳೆಯಲು ಈ ವಿಶ್ವಾಸ ಕಾರಣವಾಗುತ್ತದೆ.
ವಲನೆಯದಾಗಿ, ಪರಲೋಕ ಜೀವನದ ಕಲ್ಪನೆಯನ್ನೇ ನಿರಾಕರಿಸುತ್ತಾ ಈ
ಕದ ಜೀವನವೇ ನೈಜ ಜೀವನ ಎಂದು ನಂಬುತ್ತಾ ಬದುಕುವವರ ವರ್ಗ.
ವರು ಸಹಜವಾಗಿಯೇ ಯಾವುದಾದರೂ ಕರ್ಮ ಒಳ್ಳೆಯದೋ ಕೆಟ್ಟದೋ

ಎಂಬುದನ್ನು ತೀರ್ಮಾನಿಸುವಾಗ, ಆ ಕರ್ಮಗಳ ಇಹಲೋಕದ ಪರಿಣಾಮ ಃ
ಎಂಬ ಆಧಾರದಲ್ಲಿ ಮಾತ್ರ ತೀರ್ಮಾನಿಸುವರು. ಇಹಲೋಕದಲ್ಲಿ ಒಂದು ಕಃ
ಒಳ್ಳೆಯ ಅಥವಾ ಲಾಭದಾಯಕ ಪರಿಣಾಮ ಬೀರುವುದಾದರೆ ಅವರ ದೃಷ್ಟಿಯ
ಆ ಕರ್ಮವೇ ಸತ್ಕರ್ಮ ಎನಿಸಿಕೊಳ್ಳುವುದು. ಇಹಲೋಕದಲ್ಲಿ ನಷ್ಟದಾಯಕವೆನಿಃ
ಕರ್ಮಗಳೆಲ್ಲಾ ಅವರ ದೃಷ್ಟಿಯಲ್ಲಿ ಕೆಟ್ಟ ಕರ್ಮಗಳೆನಿಸಿಕೊಳ್ಳುವುವು. ಕೆಲವೊಃ
ಪರಿಣಾಮಗಳ ಆಧಾರದಲ್ಲಿ, ಒಮ್ಮೆ ಅವರ ದೃಷ್ಟಿಯಲ್ಲಿ ಸತ್ಕರ್ಮವೇ
ಪರಿಗಣಿಸಲ್ಪಟ್ಟ ಕರ್ಮವೇ ಇನ್ನೊಮ್ಮೆ ದುಷ್ಕರ್ಮ ಎನಿಸಿಕೊಳ್ಳಬಹು
ಎರಡನೆಯದಾಗಿ, ಪರಲೋಕದ ಬಗ್ಗೆ ನಂಬಿಕೆ ಇದ್ದರೂ ಯಾರದಾದ
ಶಿಫಾರಸಿನ ಬಲದಿಂದ ತಾವು ಅಲ್ಲಾಹನ ಕೈಯಿಂದ ರಕ್ಷಿಸಲ್ಪಡಬಲ್ಲೆವು, ತಃ
ಪಾಪದ ಪ್ರಾಯಶ್ಚಿತ್ತವನ್ನು ಈಗಾಗಲೇ ಇತರರು ಅರ್ಪಿಸಿದ್ದಾರೆ ಅಥವಾ ತ
ಅಲ್ಲಾಹನ ವಿಶೇಷ ಪ್ರೀತಿಗೆ ಪಾತ್ರರಾಗಿದ್ದು, ತಾವೆಷ್ಟು ದೊಡ್ಡ ಪಾಪಗಃ
ಮಾಡಿದರೂ ಕೇವಲ ನಾಮ ಮಾತ್ರ ಶಿಕ್ಷೆಯನ್ನು ಮಾತ್ರ ಅನುಭವಿಸಿ ಕೊ
ಮುಕ್ತಿ ಪಡೆಯುವೆವು ಎಂಬ ಭರವಸೆಯಲ್ಲಿರುವ ವರ್ಗ. ಇವರ ಈ ಭ್ರ
ಗಳಿಂದಾಗಿ ಇವರ ಪರಲೋಕ ವಿಶ್ವಾಸವು ನಿಷ್ಪ್ರಯೋಜಕವಾಗುತ್ತದೆ. ಪರಲೊ
ವಿಶ್ವಾಸವು ಅನ್ಯಥಾ ಯಾವ ಪ್ರಭಾವ ಬೀರಬೇಕಿತ್ತೋ ಅದನ್ನು ಬೀರದೆ ಇಃ
ತಮ್ಮ ಪರಲೋಕ ವಿಶ್ವಾಸದ ಹೊರತಾಗಿಯೂ ಅಂತಹ ವಿಶ್ವಾಸ ಇ
ಮೊದಲನೆಯ ವರ್ಗದವರಂತೆಯೇ ಆಗಿ ಬಿಡುವರು. ಮೂರನೆಯದಾಗಿ, ಪರಲೊ
ವಿಶ್ವಾಸವನ್ನು ಇಸ್ಲಾಮ್ ಪ್ರತಿಪಾದಿಸುವಂತೆಯೇ ಅಕ್ಷರಶಃ ಅಂಗೀಕರಿಸುವ ಮ
ಪ್ರಾಯಶ್ಚಿತ್ತ, ಶಿಫಾರಸ್ಸು, ರಿಯಾಯಿತಿ ಇತ್ಯಾದಿ ಭ್ರಮೆಗಳನ್ನು ಆಶ್ರಯಿ
ಜವಾಬ್ದಾರಿಯುತ ಬದುಕು ಸಾಗಿಸುವವರ ವರ್ಗ. ಈ ವರ್ಗದ ಜನರ ಪಾ
ಅವರ ಪರಲೋಕ ವಿಶ್ವಾಸವು ಒಂದು ದೊಡ್ಡ ನೈತಿಕ ಶಕ್ತಿಯಾಗಿರುತ್ತದೆ. ಒ
ವ್ಯಕ್ತಿಯ ಆತ್ಮ ಸಾಕ್ಷಿಯಲ್ಲಿ ಪರಲೋಕ ವಿಶ್ವಾಸವು ತನ್ನ ನಿಜರೂಪದಲ್ಲಿ ಓ
ಮಾಡಿಕೊಂಡಿದ್ದರೆ ಅವನಿಗೆ ಸದಾ ತನ್ನ ಸುತ್ತಮುತ್ತ ರಕ್ಷಕ ಭಟರು ನಿಂತಿರುವ
ಕ್ಷಣಕ್ಷಣವೂ ತನ್ನನ್ನು ಕೆಡುಕಿನಿಂದ ಮತ್ತು ಕೆಟ್ಟ ವಿಚಾರಗಳಿಂದ ತಡೆಯುತ್ತಿ
ವಂತೆ, ಪ್ರತಿಯೊಂದು ಹೆಜ್ಜೆಯಲ್ಲೂ ತನ್ನನ್ನು ಎಚ್ಚರಿಸುತ್ತಿರುವಂತೆ ಭ
ವಾಗುತ್ತದೆ. ಹೊರಗೆ ಅವನನ್ನು ತಡೆಯುವ ಪೊಲೀಸರಾಗಲಿ, ಅವನ ವಿರು

ಸಾಕ್ಷಿ ಹೇಳುವವರಾಗಲಿ, ಶಿಕ್ಷಿಸುವ ನ್ಯಾಯಾಲಯವಾಗಲಿ, ನೋಡುವವರಾಗಲಿ, ದೂಷಿಸುವವರಾಗಲಿ ಇಲ್ಲದಿದ್ದರೂ ಆತನ ಈ ಪ್ರಜ್ಞೆಯು ಅವನನ್ನು ಕೆಡುಕು ಮಾಡದಂತೆ ತಡೆದಿಡುವುದು. ಏಕಾಂತದಲ್ಲಾಗಲಿ, ಬಹಿರಂಗದಲ್ಲಾಗಲಿ, ಕಾಡಿನಲ್ಲಿರಲಿ, ನಾಡಿನಲ್ಲಿರಲಿ, ಬೆಳಕಿನಲ್ಲಿರಲಿ, ಕತ್ತಲೆಯಲ್ಲಿರಲಿ ಎಲ್ಲೂ ಅವನು ದೇವ ನಿಶ್ಚಿತ ಕರ್ತವ್ಯಗಳನ್ನು ನಿರ್ಲಕ್ಷಿಸಲು, ದೇವ ನಿಶ್ಚಿತ ನಿಯಮಗಳನ್ನು ಉಲ್ಲಂಘಿಸಲು ಮತ್ತು ದೇವನು ವಿರೋಧಿಸಿದ ಕಾರ್ಯಗಳನ್ನು ಎಸಗಲು ಖಂಡಿತ ಧೈರ್ಯ ಮಾಡಲಾರನು. ಒಂದು ವೇಳೆ ಅಚಾತುರ್ಯದಿಂದ ಅಂತಹ ಏನಾದರೂ ತಪ್ಪು ಅವನಿಂದ ಸಂಭವಿಸಿ ಬಿಟ್ಟರೂ ಅವನು ತಕ್ಷಣವೇ ಆ ಬಗ್ಗೆ ನಾಚಿಕೆ ಪಟ್ಟು ಪಶ್ಚಾತ್ತಾಪ ಪಡುವನು. ನೈಜ ಪರಲೋಕ ವಿಶ್ವಾಸದ ಹೊರತು ಬೇರಾವ ವಸ್ತುವೂ ಮನುಷ್ಯರನ್ನು ನೈತಿಕವಾಗಿ ಇಷ್ಟು ಸಂಸ್ಕರಿಸಲು, ಅವನಲ್ಲಿ ಇಷ್ಟು ಶಕ್ತಿಯುತ ಸಚ್ಚಾರಿತ್ರ್ಯವನ್ನು ಬೆಳೆಸಲು ಶಕ್ತವಾಗಲಾರದು. ದೇವನಿರ್ಮಿತ ಪರಮೋಚ್ಚ ಕಾನೂನಿನ ಮೂಲಕ ಸಿಗುವ ಶಾಶ್ವತ ಮೌಲ್ಯಗಳನ್ನು ಮನುಷ್ಯನು ತನ್ನ ಬದುಕಿನಲ್ಲಿ ಕಟ್ಟುನಿಟ್ಟಾಗಿ ಪಾಲಿಸಬೇಕಾದರೆ ಮತ್ತು ಯಾವ ಸ್ಥಿತಿಯಲ್ಲೂ ಆ ಮೌಲ್ಯಗಳನ್ನು ಕೈ ಬಿಡದೆ ಇರಬೇಕಾದರೆ ಇಂತಹ ಪರಲೋಕ ವಿಶ್ವಾಸ ಅನಿವಾರ್ಯ. ಆದ್ದರಿಂದಲೇ ಇಸ್ಲಾಮ್ ಧರ್ಮವು ಪರಲೋಕ ವಿಶ್ವಾಸಕ್ಕೆ ಎಷ್ಟು ಮಹತ್ವ ಕೊಟ್ಟಿದೆ ಎಂದರೆ ಈ ವಿಶ್ವಾಸವು ಇಲ್ಲದಿದ್ದಲ್ಲಿ, ಅಲ್ಲಾಹನ ಮೇಲಿನ ವಿಶ್ವಾಸವಾಗಲಿ ಪ್ರವಾದಿಗಳ ಮೇಲಿನ ವಿಶ್ವಾಸವಾಗಲಿ ನಿಷ್ಪ್ರಯೋಜಕವಾಗುತ್ತದೆ.

16. 6ನೇ ಪರಿಚ್ಛೇದದಲ್ಲಿ ತಿಳಿಸಿದಂತೆ, ಇಸ್ಲಾಮ್ ಒಂದು ಪರಿಪೂರ್ಣ ನಾಗರಿಕತೆ, ಒಂದು ಸಮಗ್ರ ಸಂಸ್ಕೃತಿ ಮತ್ತು ಒಂದು ಸಂಪೂರ್ಣ ಜೀವನ ವ್ಯವಸ್ಥೆಯಾಗಿದೆ. ಅದು ಮನುಷ್ಯ ಜೀವನದ ಎಲ್ಲ ಕ್ಷೇತ್ರಗಳಲ್ಲೂ ನೈತಿಕ ಮಾರ್ಗದರ್ಶನ ಕೊಡುತ್ತದೆ. ಅದರ ನೈತಿಕ ಬೋಧನೆಗಳು ಲೋಕತ್ಯಾಗಿ ಸನ್ಯಾಸಿಗಳಿಗಾಗಿ ರಚಿಸಲ್ಪಟ್ಟಿದೆ. ಅವು ಜೀವನದ ವಿಭಿನ್ನ ಕ್ಷೇತ್ರಗಳಲ್ಲಿ ಸಕ್ರಿಯ ರಾಗಿರುವ ಸಮಾಜ ಜೀವಿಗಳಿಗಾಗಿ ರಚಿಸಲ್ಪಟ್ಟಿಲ್ಲ. ಜಗತ್ತು ಸಾಮಾನ್ಯವಾಗಿ ಮಠ, ಆಶ್ರಮ ಮತ್ತು ಧಾರ್ಮಿಕ ಸ್ಥಳ (Convents, Monasteries, cloisters etc) ಗಳಲ್ಲಿ ಮಾತ್ರ ನಿರೀಕ್ಷಿಸುವಂತಹ ನೈತಿಕ ಔನ್ನತ್ಯವನ್ನು ಇಸ್ಲಾಮ್ ಧರ್ಮವು ನಿತ್ಯ ಜೀವನದ ಪ್ರಧಾನ ವಾಹಿನಿಯಲ್ಲೇ ಕಾಣಬಯಸುತ್ತದೆ. ಆಡಳಿತಗಾರರು, ಸಚಿವರು,

ಅಧಿಕಾರಿಗಳು, ನ್ಯಾಯಧೀಶರು, ಪೊಲೀಸರು, ಸೈನಿಕರು, ಸಾಂಸದಿಕರು, ಶಾಸಕರು, ಕಾರ್ಮಿಕರು, ಉದ್ಯಮಿಗಳು, ಶಿಕ್ಷಕರು, ವಿದ್ಯಾರ್ಥಿಗಳು, ಮಕ್ಕಳು, ಹೆತ್ತವರು, ಮಹಿಳೆಯರು, ಪತಿಯರು, ಪತ್ನಿಯರು ಹೀಗೆ ಎಲ್ಲರೂ ಎಲ್ಲ ಸ್ತರದಲ್ಲೂ ಉನ್ನತ ನೈತಿಕ ಮೌಲ್ಯಗಳಿಗೆ ಬದ್ಧರಾಗಿರಬೇಕೆಂದು ಇಸ್ಲಾಮ್ ಬಯಸುತ್ತದೆ. ಪ್ರತಿಯೊಂದು ಮನೆಯಲ್ಲೂ ಕೇರಿ-ಬೀದಿಗಳಲ್ಲೂ ತನ್ನ ನೈತಿಕ ಮೌಲ್ಯಗಳು ಮೆರೆಯಬೇಕು. ರಾಜಕೀಯ ವ್ಯವಸ್ಥೆ ಸತ್ಯ ಮತ್ತು ನ್ಯಾಯದ ಆಧಾರದಲ್ಲಿ ನಡೆಯಬೇಕು. ಜನವರ್ಗಗಳು ಪರಸ್ಪರರ ಹಕ್ಕುಗಳನ್ನು ಗೌರವಿಸುತ್ತಾ, ನ್ಯಾಯಬದ್ಧವಾಗಿ ವ್ಯವಹರಿಸಬೇಕು, ಯುದ್ಧ ನಡೆದರೂ ಮಾನವೀಯತೆಯ ಮಿತಿಯೊಳಗೆ ನಡೆಯಬೇಕೇ ಹೊರತು ಪಾಶವೀಯತೆಗೆ ಇಳಿಯಬಾರದು ಎಂಬುದು ಇಸ್ಲಾಮಿನ ಬಯಕೆಯಾಗಿದೆ. ಮನುಷ್ಯನು ದೇವಭಕ್ತನಾಗಿ, ದೇವನ ಕಾನೂನನ್ನೇ ಪರಮೋಚ್ಚ ಕಾನೂನೆಂದು ಅಂಗೀಕರಿಸಿ, ನಾಳೆ ಅವನ ವಿಚಾರಣೆ ಎದುರಿಸಲಿಕ್ಕಿದೆಯೆಂಬ ಪ್ರಜ್ಞೆಯೊಂದಿಗೆ ಅವನು ಕೊಟ್ಟ ಶಾಶ್ವತ ಮೌಲ್ಯಗಳಿಗೆ ಬದ್ಧನಾಗಿ ಬಿಟ್ಟರೆ ಅವನ ಈ ಕಟ್ಟುನಿಟ್ಟು ಕೇವಲ ಆರಾಧನಾಲಯಗಳಿಗೆ ಸೀಮಿತಗೊಳ್ಳದೆ ಅವನು ಜೀವನದ ಯಾವ ರಂಗದಲ್ಲಿದ್ದರೂ ಎಲ್ಲಿದ್ದರೂ ಸದಾ ದೇವನಿಷ್ಠನಾಗಿ, ಪ್ರಾಮಾಣಿಕನಾಗಿಯೇ ಬದುಕುವನು.

ಸಂಕ್ಷಿಪ್ತವಾಗಿ ಇವೇ ಇಸ್ಲಾಮಿನ ಪ್ರತಿಪಾದನೆಗಳು. ಇದು ಒಬ್ಬ ತತ್ವಜ್ಞಾನಿಯ ಭ್ರಮಾಲೋಕ (Utopia) ಅಲ್ಲ. ಪ್ರವಾದಿ ಮುಹಮ್ಮದ್(ಸ) ಅವರು ಇಂತಹ ಒಂದು ಮಾದರೀ ಸಮಾಜವನ್ನು ಪ್ರಾಯೋಗಿಕವಾಗಿ ಸ್ಥಾಪಿಸಿ ತೋರಿಸಿದ್ದರು. ಇಂದಿಗೆ ಹದಿನಾಲ್ಕು ಶತಮಾನಗಳು ಕಳೆದರೂ ಮುಸ್ಲಿಮ್ ಸಮಾಜದಲ್ಲಿ ಆ ವೈಶಿಷ್ಟ್ಯಗಳು ಹೆಚ್ಚು ಕಡಿಮೆ ಇಂದಿಗೂ ಉಳಿದುಕೊಂಡಿವೆ.

---

ಸೂಚನೆ: ಈ ಪ್ರಬಂಧದಲ್ಲಿ ಒಂದೆಡೆ ನಾನು "ಪ್ರವಾದಿಯು ಮನುಷ್ಯ ಸಹಜ ದೌರ್ಬಲ್ಯಗಳಿಂದ ಮುಕ್ತನಾಗಿರುವುದಿಲ್ಲ" ಎಂದು ಬರೆದಿರುವ ಬಗ್ಗೆ ಕೆಲವರು ಆಕ್ಷೇಪವೆತ್ತಿದ್ದಾರೆ. ಇಲ್ಲಿ ನಾನು 'ದೌರ್ಬಲ್ಯ' ಎಂದು ಹೇಳಿರುವುದು, ಹಸಿವು, ದಾಹ, ದಣಿವು, ವಿಶ್ರಾಂತಿಯ ಅಗತ್ಯ, ನಿದ್ರೆ, ಅನಾರೋಗ್ಯ, ನೋವು, ಸಂತಸ, ದುಃಖ ಮುಂತಾದ ಸಾಮಾನ್ಯ ಮನುಷ್ಯರಂತೆ ಮನುಷ್ಯ ಸಹಜವಾಗಿ ಪ್ರವಾದಿಗಳಲ್ಲೂ ಇರುವ ಗುಣಗಳ ಬಗ್ಗೆ ಮಾತ್ರ.

---